ಕರ್ನಾಟಕ ಸರ್ಕಾರ

ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1510

ಸದಸ್ಯರ ಹೆಸರು : ಶ್ರೀ ತುಕಾರಾಮ್ ಈ. (ಸಂಡೂರ್)

ಉತ್ತರಿಸಬೇಕಾದ ದಿನಾಂಕ : 25-09-2020

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ | ಸರ್ಕಾರದ ಅಧೀನದಲ್ಲಿ ಬರುವ ಸಾರ್ವಜನಿಕ ಉದ್ದಿಮೆಗಳು ಎಷ್ಟು; ಇವುಗಳಲ್ಲಿ ಎಷ್ಟು ಉದ್ಯಮಗಳು ಲಾಭದಲ್ಲಿ ನಡೆಯುತ್ತಿದೆ; (ವಿವರಗಳನ್ನು ನೀಡುವುದು) | ಕರ್ನಾಟಕ ರಾಜ್ಯದಲ್ಲಿ ಸಾರ್ವಜನಿಕ ಉದ್ದಿಮೆಗಳ ವ್ಯಾಪ್ತಿಯಲ್ಲಿ ಒಟ್ಟು 60 ಸಾರ್ವಜನಿಕ ಉದ್ದಿಮೆಮಗಳಿವೆ. ಈ ಉದ್ದಿಮೆಗಳು 22 ವಿವಿಧ ಆಡಳಿತ ಇಲಾಖೆಗಳ ಕಾರ್ಯವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿವೆ. ಈ 60 ಸಾರ್ವಜನಿಕ ಉದ್ದಿಮೆಗಳಲ್ಲಿ 37 ಸಾರ್ವಜನಿಕ ಉದ್ದಿಮೆಗಳು ಲಾಭದಲ್ಲಿ ನಡೆಯುತ್ತಿವೆ ಪಟ್ಟಿಯನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ. |
| ಆ | ನಷ್ಟದಲ್ಲಿರುವ ಉದ್ದಿಮೆಗಳ ಸಂಖ್ಯೆ ಎಷ್ಟು ಹಾಗೂ ನಷ್ಟದಲ್ಲಿ ನಡೆಯಲು ಕಾರಣಗಳೇನು; ಅಂತಹ ಉದ್ದಿಮೆಗಳನ್ನು ಲಾಭದಾಯಕವಾಗಿ ಮಾಡಲು ಯಾವ ಕ್ರಮಗಳನ್ನು ಕೈಗೊಂಡಿದೆ? (ವಿವರಗಳನ್ನು ನೀಡುವುದು) | ನಷ್ಟದಲ್ಲಿರುವ ಉದ್ದಿಮೆಗಳ ಸಂಖ್ಯೆ 18. ನಷ್ಟ ಅನುಭವಿಸುತ್ತಿರುವ ಈ 18 ಉದ್ದಿಮಗಳ ಪೈಕಿ, 13 ಉದ್ದಿಮೆಗಳು ಸಾರ್ವಜನಿಕ ಸಾರಿಗೆ, ವಿದ್ಯುತ್ ಪ್ರಸರಣ, ನೀರಾವರಿ, ಮೂಲಭೂತ ಸೌಲಭ್ಯ ಅಭಿವೃದ್ಧಿ ಮತ್ತು ಸಾಮಾಜಿಕ ಅಭಿವೃದ್ಧಿ(ವಾಣಿಜ್ಯ) ಕ್ಷೇತ್ರದ ಉದ್ದಿಮೆಗಳಾಗಿದ್ದು, ಈ ಎಲ್ಲಾ ಉದ್ದಿಮೆಗಳು ಸಮಾಜದ ಎಲ್ಲಾ ಸ್ಥರದ ನಾಗರಿಕರಿಗೆ ಮೂಲಭೂತ ಸೌಕರ್ಯ ಕಲ್ಪಿಸುವ ಉದ್ದಿಮೆಗಳಾಗಿರುತ್ತವೆ. ಈ ಉದ್ದಿಮೆಗಳ ಪುನಶ್ಚೇತನಕ್ಕೆ ಸಾರ್ವಜನಿಕ ಉದ್ದಿಮೆಗಳ ಇಲಾಖೆಯು ಪ್ರತೀ ವರ್ಷ ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದ ಮುಖಾಂತರ, ನಷ್ಟದಲ್ಲಿರುವ ಉದ್ದಿಮೆಗಳ ಮೌಲ್ಯಮಾಪನ ನಡೆಸುತ್ತದೆ. ಸದರಿ ಪ್ರಾಧಿಕಾರವು ಸೂಚಿಸುವ ಕ್ರಮಗಳನ್ನು ಕಾರ್ಯಗತಗೊಳಿಸಿ, ಉದ್ದಿಮೆಗಳ ಪುನಶ್ಚೇತನಕ್ಕೆ ಸಂಬಂಧಪಟ್ಟ ಆಡಳಿತ ಇಲಾಖೆಗಳು ನಿರಂತರವಾಗಿ ಕ್ರಮವಹಿಸುತ್ತಿವೆ. |

(ಜಗದೀಶ್ ಶೆಟ್ಟರ್)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ

ಸಾರ್ವಜನಿಕ ಉದ್ದಿಮೆಗಳ ಸಚಿವರು

ಅನುಬಂಧ-1

ಅನುಬಂಧ-1

## ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ವ್ಯಾಪ್ತಿಯ ಸಾರ್ವಜನಿಕ ಉದ್ದಿಮೆಗಳು

| ಕ್ರ.ಸಂ. | ಸಾರ್ವಜನಿಕ ಉದ್ದಿಮೆ |
|---|---|
| 1 | ಕರ್ನಾಟಕ ಸಾಬೂನು ಮತ್ತು ಮಾರ್ಜಕ ನಿಯಮಿತ |
| 2 | ಕರ್ನಾಟಕ ವಿದ್ಯುತ್ ಕಾರ್ಖಾನೆ ನಿಯಮಿತ |
| 3 | ದಿ. ಮೈಸೂರು ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ ಲಿಮಿಟೆಡ್ |
| 4 | ಮೈಸೂರ್ ಪೇಯಿಂಟ್ಸ್ & ವಾರ್ನಿಷ್ ಲಿಮಿಟೆಡ್ |
| 5 | ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ |
| 6 | ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೊರೇಷನ್ ಲಿಮಿಟೆಡ್ |
| 7 | ಮಾರ್ಕೆಟಿಂಗ್ ಕನ್ಸಲ್ಟೆಂಟ್ಸ್ ಅಂಡ್ ಏಜೆನ್ಸೀಸ್ ಲಿಮಿಟೆಡ್ |
| 8 | ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್ |
| 9 | ಕರ್ನಾಟಕ ರಾಜ್ಯ ಕೈಗಾರಿಕಾ ಮತ್ತು ಮೂಲಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ |
| 10 | ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ |
| 11 | ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ |
| 12 | ಕರ್ನಾಟಕ ರಾಜ್ಯ ಜವಳಿ ಮೂಲ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ |
| 13 | ಮೈಸೂರು ಕಾಗದ ಕಾರ್ಖಾನೆ ನಿಯಮಿತ |
| 14 | ಮೈಸೂರು ಸಕ್ಕರೆ ಕಂಪನಿ ನಿಯಮಿತ |
| 15 | ಎನ್‌ಜಿಇಎಫ್ (ಹುಬ್ಬಳ್ಳಿ) ನಿಯಮಿತ |
| 16 | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ |
| 17 | ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ ನಿಯಮಿತ |
| 18 | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ |
| 19 | ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತ |
| 20 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ |
| 21 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ |
| 22 | ಕರ್ನಾಟಕ ವಿದ್ಯುತ್ ನಿಗಮ ನಿಯಮಿತ |
| 23 | ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ |
| 24 | ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿ ನಿಯಮಿತ |
| 25 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ |
| 26 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ |
| 27 | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ |
| 28 | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ |
| 29 | ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ |
| 30 | ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ |
| 31 | ಡಿ. ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಲಿಮಿಟೆಡ್ |
| 32 | ಅರಣ್ಯ ವಸತಿ ಮತ್ತು ವಿಹಾರಧಾಮಗಳ ಸಂಸ್ಥೆ |
| 33 | ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ |

| | |
|---|---|
| 34 | ಕಾವೇರಿ ನೀರಾವರಿ ನಿಗಮ ನಿಯಮಿತ |
| 35 | ಕರ್ನಾಟಕ ನೀರಾವರಿ ನಿಗಮ ನಿಯಮಿತ |
| 36 | ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ |
| 37 | ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ |
| 38 | ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ |
| 39 | ಕರ್ನಾಟಕ ಗೇರು ಅಭಿವೃದ್ಧಿ ನಿಗಮ ನಿಯಮಿತ |
| 40 | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ |
| 41 | ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್ |
| 42 | ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತ |
| 43 | ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಹಾಗೂ ರಫ್ತು ನಿಗಮ ನಿಯಮಿತ |
| 44 | ಕರ್ನಾಟಕ ದ್ವಿದಳ ಧಾನ್ಯ ಅಭಿವೃದ್ಧಿ ಮಂಡಳಿ ನಿಯಮಿತ |
| 45 | ಕರ್ನಾಟಕ ಕಾಂಪೋಸ್ಟ್ ಅಭಿವೃದ್ಧಿ ನಿಗಮ ನಿಯಮಿತ |
| 46 | ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ |
| 47 | ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ |
| 48 | ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ |
| 49 | ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತ |
| 50 | ಡಾ. ಬಾಬು ಜಗಜೀವನರಾಂ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ (ಲಿಡ್‌ಕರ್) |
| 51 | ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ |
| 52 | ಕರ್ನಾಟಕ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ |
| 53 | ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ |
| 54 | ಕರ್ನಾಟಕ ಮೀನುಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ |
| 55 | ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ |
| 56 | ಕರ್ನಾಟಕ ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ |
| 57 | ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ |
| 58 | ಕರ್ನಾಟಕ ರಾಜ್ಯ ಉಗ್ರಾಣ ನಿಗಮ |
| 59 | ಶ್ರೀ ಕಂಠೀರವ ಸ್ಟುಡಿಯೋ ನಿಯಮಿತ |
| 60 | ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ |

ಲಾಭದಲ್ಲಿರುವ ಉದ್ದಿಮೆಗಳು

| ಕ್ರ.ಸಂ. | ಸಾರ್ವಜನಿಕ ಉದ್ದಿಮೆ |
|---|---|
| 1 | ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೊರೇಷನ್ ಲಿಮಿಟೆಡ್ |
| 2 | ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ |
| 3 | ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್ |
| 4 | ಕರ್ನಾಟಕ ಸಾಬೂನು ಮತ್ತು ಮಾರ್ಜಕ ನಿಯಮಿತ |
| 5 | ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ |
| 6 | ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ |
| 7 | ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತ |

1510

| | |
|---|---|
| 8 | ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ |
| 9 | ಕರ್ನಾಟಕ ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ |
| 10 | ಕರ್ನಾಟಕ ರಾಜ್ಯ ಪಾನೀಯ ನಿಗಮ ನಿಯಮಿತ |
| 11 | ಮಾರ್ಕೆಟಿಂಗ್ ಕಮ್ಯುನಿಕೇಷನ್ ಅಂಡ್ ಅಡ್ವರ್ಟೈಸಿಂಗ್ ಲಿಮಿಟೆಡ್ |
| 12 | ಕಾವೇರಿ ನೀರಾವರಿ ನಿಗಮ ನಿಯಮಿತ |
| 13 | ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ |
| 14 | ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್ |
| 15 | ದಿ. ಮೈಸೂರು ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ ಲಿಮಿಟೆಡ್ |
| 16 | ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ |
| 17 | ಅರಣ್ಯ ವಸತಿ ಮತ್ತು ವಿಹಾರಧಾಮಗಳ ಸಂಸ್ಥೆ |
| 18 | ಕರ್ನಾಟಕ ರಾಜ್ಯ ಉಗ್ರಾಣ ನಿಗಮ |
| 19 | ಮೈಸೂರ್ ಪೇಯಿಂಟ್ಸ್ & ವಾರ್ನಿಷ್ ಲಿಮಿಟೆಡ್ |
| 20 | ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ |
| 21 | ಕರ್ನಾಟಕ ಮೀನುಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ |
| 22 | ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ |
| 23 | ದಿ. ದೇವರಾಜ ಅರಸ್ ಟ್ರಕ್ ಟರ್ಮಿನಲ್ಸ್ ಲಿಮಿಟೆಡ್ |
| 24 | ಕರ್ನಾಟಕ ದ್ವಿದಳಧಾನ್ಯ ಅಭಿವೃದ್ಧಿ ಮಂಡಳಿ ನಿಯಮಿತ |
| 25 | ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಹಾಗೂ ರಫ್ತು ನಿಗಮ ನಿಯಮಿತ |
| 26 | ಶ್ರೀ ಕಂಠೀರವ ಸ್ಟುಡಿಯೋ ನಿಯಮಿತ |
| 27 | ಕರ್ನಾಟಕ ರಾಜ್ಯ ಜವಳಿ ಮೂಲ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ |
| 28 | ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ |
| 29 | ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿ ನಿಯಮಿತ |
| 30 | ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತ |
| 31 | ಕರ್ನಾಟಕ ವಿದ್ಯುತ್ ನಿಗಮ ನಿಯಮಿತ |
| 32 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ |
| 33 | ಕರ್ನಾಟಕ ರಾಜ್ಯ ಕೈಗಾರಿಕಾ ಮತ್ತು ಮೂಲಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ |
| 34 | ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ |
| 35 | ಡಾ. ಬಾಬು ಜಗಜೀವನರಾಂ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ (ಲಿಡ್‌ಕರ್) |
| 36 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ |
| 37 | ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ |

**ಕರ್ನಾಟಕ ವಿಧಾನ ಸಭೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ : 1513

ಸದಸ್ಯರ ಹೆಸರು : ಶ್ರೀಮತಿ ಕುಸುಮಾವತಿ ಚನ್ನಬಸಪ್ಪ ಶಿವಳ್ಳಿ

ಉತ್ತರಿಸುವ ಸಚಿವರು : ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಉತ್ತರಿಸಬೇಕಾದ ದಿನಾಂಕ : 25.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಧಾರವಾಡ ಜಿಲ್ಲೆಯ 2019-20 ಹಾಗೂ 2020-21ನೇ ಸಾಲಿನಲ್ಲಿ ತೋಟಗಾರಿಕಾ ಇಲಾಖೆಗೆ ನಿಗದಿಪಡಿಸಿದ ಅನುದಾನದ ಮೊತ್ತವೆಷ್ಟು; (ತಾಲ್ಲೂಕುವಾರು ವಿವರ ನೀಡುವುದು) | ಧಾರವಾಡ ಜಿಲ್ಲೆಗೆ ತೋಟಗಾರಿಕೆ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ 2019-20ನೇ ಸಾಲಿನಲ್ಲಿ ರೂ.1551.56 ಲಕ್ಷಗಳು ಹಾಗೂ 2020-21ನೇ ಸಾಲಿನಲ್ಲಿ ರೂ.1944.10 ಲಕ್ಷಗಳ ಅನುದಾನವನ್ನು ನಿಗದಿಪಡಿಸಲಾಗಿರುತ್ತದೆ. ತಾಲ್ಲೂಕುವಾರು ನಿಗದಿಯಾದ ಅನುದಾನದ ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ. |
| ಆ) | 2020-21ನೇ ಸಾಲಿನಲ್ಲಿ ರೈತರಿಗೆ ನೂತನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆಯೇ; ಹಾಗಿದ್ದಲ್ಲಿ, ಸದರಿ ಕಾರ್ಯಕ್ರಮಗಳ ಮಾರ್ಗಸೂಚಿಗಳೇನು; | 2020-21ನೇ ಸಾಲಿನಲ್ಲಿ ನೂತನ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದಿಲ್ಲ. |
| ಇ) | ಕುಂದಗೋಳ ಪಟ್ಟಣ ಪಂಚಾಯಿತಿಗೆ 2019-20ರಲ್ಲಿ ನೀಡಿದ ಅನುದಾನ ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅನುದಾನ ಬಿಡುಗಡೆ ಮಾಡಲು ಕೈಗೊಂಡ ಕ್ರಮವೇನು? (ವಿವರ ನೀಡುವುದು) | ಕುಂದಗೋಳ ಪಟ್ಟಣ ಪಂಚಾಯಿತಿಯು ತೋಟಗಾರಿಕಾ ಇಲಾಖೆಯ ವ್ಯಾಪ್ತಿಗೆ ಬರುವುದಿಲ್ಲ. |

**ಸಂಖ್ಯೆ: HORTI 371 HGM 2020**

(ನಾರಾಯಣಗೌಡ)

**ಪೌರಾಡಳಿತ, ತೋಟಗಾರಿಕೆ ಮತ್ತು**

**ರೇಷ್ಮೆ ಸಚಿವರು**

1513

LHQ-1513

ಅನುಬಂಧ-1

# 2019-20 ನೇ ಸಾಲಿನಲ್ಲಿ ಧಾರವಾಡ ಜಿಲ್ಲೆಗೆ ತೋಟಗಾರಿಕಾ ಇಲಾಖೆಯ ವಿವಿಧ ಯೋಜನೆಗಳಡಿ ತಾಲ್ಲೂಕುವಾರು ನಿಗದಿಪಡಿಸಿದ ಅನುದಾನದ ವಿವರ

| ಕ್ರ. ಸಂ. | ಯೋಜನೆ | ಲೆಕ್ಕ ಶೀರ್ಷಿಕೆ | 2019-20ನೇ ಸಾಲಿನಲ್ಲಿ ನಿಗದಿಯಾದ ಅನುದಾನ (ರೂ.ಲಕ್ಷಗಳಲ್ಲಿ) | | | | | |
|---|---|---|---|---|---|---|---|---|
| | | | ಧಾರವಾಡ | ಹುಬ್ಬಳ್ಳಿ | ಕಲಘಟಗಿ | ಕುಂದಗೋಳ | ನವಲಗುಂದ | ಒಟ್ಟು |
| I | ಕೇಂದ್ರ ನೆರವಿನ ಯೋಜನೆಗಳು | | | | | | | |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ | 2401-00-108-2-30 | 175.40 | 35.00 | 84.37 | 10.97 | 24.16 | 329.90 |
| 2 | ರಾಷ್ಟ್ರೀಯ ತೋಟಗಾರಿಕೆ ಮಿಷನ್ | 2401-00-119-4-06 | 85.18 | 148.26 | 42.61 | 70.28 | 42.42 | 388.75 |
| 3 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ | 2401-00-800-1-57 | 26.95 | 52.39 | 43.51 | 22.61 | 21.24 | 166.70 |
| | ಒಟ್ಟು | | 287.53 | 235.65 | 170.49 | 103.86 | 87.82 | 885.35 |
| II | ರಾಜ್ಯವಲಯ ಯೋಜನೆಗಳು | | | | | | | |
| 1 | ನಿರ್ದೇಶನ ಮತ್ತು ಆಡಳಿತ | 2401-00-001-2-01 | 1.85 | 2.00 | 1.87 | | 1.62 | 7.34 |
| 3 | ಸಾಂಬಾರು ಪಧಾರ್ಥಗಳ ಅಭಿವೃದ್ಧಿ ಮಂಡಳಿ | 2401-00-108-2-53 | | 200.00 | | | | 200.00 |
| 4 | ಸಮಗ್ರ ತೋಟಗಾರಿಕಾ ಅಭಿವೃದ್ಧಿ | 2401-00-111-0-08 | 114.77 | 44.56 | 45.99 | 28.61 | 18.58 | 252.51 |
| 6 | ಇಲಾಖಾ ಪ್ರಯೋಗ ಶಾಲೆಗಳ ಅಭಿವೃದ್ಧಿ | 2401-00-119-5-01 | 0.30 | 0.30 | | | | 0.60 |
| 7 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ | 2401-00-119-5-02 | 13.31 | 10.50 | 7.99 | 3.15 | 5.50 | 40.45 |
| 9 | ಮಧುವನ ಮತ್ತು ಜೇನು ಸಾಕಾಣೆ ಅಭಿವೃದ್ಧಿ | 2851-00-200-0-01 | 54.98 | 3.02 | 3.02 | | 2.27 | 63.28 |
| 10 | ಕೃಷಿ ಭಾಗ್ಯ (ತೋಟಗಾರಿಕೆ) | 2401-00-800-2-48 | 2.67 | | | | | 2.67 |
| | ಒಟ್ಟು | | 187.88 | 260.38 | 58.87 | 31.76 | 27.96 | 566.85 |
| III | ಜಿಲ್ಲಾವಲಯ ಯೋಜನೆಗಳು | | | | | | | |
| 1 | ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ | 2435-00-101-0-28 | 7.47 | | 7.52 | | | 14.99 |
| 2 | ತೋಟಗಾರಿಕೆ ಕಟ್ಟಡಗಳು | 2435-00-101-0-32 | 9.00 | 25.00 | | 3.00 | 1.00 | 38.00 |
| 3 | ತೋಟಗಾರಿಕೆ ಕ್ಷೇತ್ರಗಳ ನಿರ್ವಹಣೆ | 2435-00-101-0-35 | 3.00 | | 4.10 | | 2.60 | 9.70 |
| 4 | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ | 2435-00-101-0-36 | 0.69 | | 1.01 | | | 1.70 |
| 5 | ಪ್ರಚಾರ ಮತ್ತು ಸಾಹಿತ್ಯ | 2435-00-101-0-38 | 4.70 | 0.20 | 0.20 | 0.20 | 0.20 | 5.50 |
| 6 | ಶೀಥಲ ಗೃಹಗಳಿಗೆ ಸಹಾಯಧನ ಯೋಜನೆ | 2435-00-101-0-39 | | 8.00 | | | | 8.00 |
| 7 | ಜೇನು ಸಾಕಾಣಿಕೆ | 2851-00-107-0-33 | 14.03 | | | | | 14.03 |
| 8 | ರೈತರಿಗೆ ಸಹಾಯ | 2435-00-101-0-62 | 1.64 | | 1.64 | 1.64 | 1.62 | 6.54 |
| 9 | ರೈತರಿಗೆ ತರಬೇತಿ | 2435-00-101-0-64 | 0.18 | 0.18 | 0.18 | 0.18 | 0.18 | 0.90 |
| | ಒಟ್ಟು | | 40.71 | 33.38 | 14.65 | 5.02 | 5.60 | 99.36 |
| | ಒಟ್ಟಾರೆ | | 516.12 | 529.41 | 244.01 | 140.64 | 121.38 | 1551.56 |

ಅನುಬಂಧ-1

## 2020-21ನೇ ಸಾಲಿನಲ್ಲಿ ಧಾರವಾಡ ಜಿಲ್ಲೆಗೆ ತೋಟಗಾರಿಕಾ ಇಲಾಖೆಯ ವಿವಿಧ ಯೋಜನೆಗಳಡಿ ತಾಲ್ಲೂಕುವಾರು ನಿಗದಿಪಡಿಸಿದ ಅನುದಾನದ ವಿವರ

| ಕ್ರ. ಸಂ. | ಯೋಜನೆ | ಲೆಕ್ಕ ಶೀರ್ಷಿಕೆ | 2020-21ನೇ ಸಾಲಿನಲ್ಲಿ ನಿಗದಿಯಾದ ಅನುದಾನ | | | | | |
|---|---|---|---|---|---|---|---|---|
| | | | ಧಾರವಾಡ | ಹುಬ್ಬಳ್ಳಿ | ಕಲಘಟಗಿ | ಕುಂದಗೋಳ | ನವಲಗುಂದ | ಒಟ್ಟು |
| | ಕೇಂದ್ರ ನೆರವಿನ ಯೋಜನೆಗಳು | | | | | | | |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ | 2401-00-108-2-30 | 272.62 | 54.02 | 117.09 | 54.07 | 32.21 | 530.01 |
| 2 | ರಾಷ್ಟ್ರೀಯ ತೋಟಗಾರಿಕೆ ಮಿಷನ್ | 2401-00-119-4-06 | 104.96 | 397.11 | 77.83 | 94.97 | 92.97 | 767.84 |
| 3 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ | 2401-00-800-1-57 | 24.13 | 82.23 | 16.25 | 30.45 | 17.25 | 170.31 |
| | ಒಟ್ಟು | | 401.71 | 533.36 | 211.17 | 179.49 | 142.43 | 1468.16 |
| I | ರಾಜ್ಯವಲಯ ಯೋಜನೆಗಳು | | | | | | | |
| 1 | ನಿರ್ದೇಶನ ಮತ್ತು ಆಡಳಿತ | 2401-00-001-2-01 | 0.95 | 0.95 | 0.95 | 0.95 | 0.95 | 4.75 |
| 2 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ | 2401-00-001-2-10 | 1.00 | | 1.00 | 1.00 | 1.00 | 4.00 |
| 3 | ಸಾಂಬಾರು ಪಧಾರ್ಥಗಳ ಅಭಿವೃದ್ಧಿ ಮಂಡಳಿ | 2401-00-108-2-53 | | 200.00 | | | | 200.00 |
| 4 | ಸಮಗ್ರ ತೋಟಗಾರಿಕಾ ಅಭಿವೃದ್ಧಿ | 2401-00-111-0-08 | 70.08 | 10.65 | 12.37 | 7.00 | 29.88 | 129.99 |
| 6 | ಇಲಾಖಾ ಪ್ರಯೋಗ ಶಾಲೆಗಳ ಅಭಿವೃದ್ಧಿ | 2401-00-119-5-01 | 0.20 | 0.20 | 0.20 | | | 0.60 |
| 7 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ | 2401-00-119-5-02 | 5.70 | 5.70 | 5.70 | 5.70 | 5.70 | 28.50 |
| 8 | ತೋಟಗಾರಿಕೆ ಉದ್ಯಾನವನಗಳು ಮತ್ತು ತೋಟಗಳು | 2406-02-112-0-17 | 20.00 | | | | | 20.00 |
| 9 | ಮಧುವನ ಮತ್ತು ಜೇನು ಸಾಕಾಣೆ ಅಭಿವೃದ್ಧಿ | 2851-00-200-0-01 | 5.65 | 2.34 | 1.59 | 0.34 | 0.34 | 10.25 |
| | ಒಟ್ಟು | | 103.58 | 219.84 | 21.81 | 14.99 | 37.87 | 398.09 |
| II | ಜಿಲ್ಲಾವಲಯ ಯೋಜನೆಗಳು | | | | | | | |
| 1 | ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ | 2435-00-101-0-28 | 5.31 | 2.02 | 3.62 | 2.02 | 2.02 | 14.99 |
| 2 | ತೋಟಗಾರಿಕೆ ಕಟ್ಟಡಗಳು | 2435-00-101-0-32 | | 22.84 | | | | 22.84 |
| 3 | ತೋಟಗಾರಿಕೆ ಕ್ಷೇತ್ರಗಳ ನಿರ್ವಹಣೆ | 2435-00-101-0-35 | 3.00 | | 4.10 | | 2.60 | 9.70 |
| 4 | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ | 2435-00-101-0-36 | 0.69 | | 1.01 | | | 1.70 |
| 5 | ಪ್ರಚಾರ ಮತ್ತು ಸಾಹಿತ್ಯ | 2435-00-101-0-38 | 4.70 | 0.20 | 0.20 | 0.20 | 0.20 | 5.50 |
| 6 | ಶೀತಲ ಗೃಹಗಳಿಗೆ ಸಹಾಯಧನ ಯೋಜನೆ | 2435-00-101-0-39 | | 8.00 | | | | 8.00 |
| 7 | ಜೇನು ಸಾಕಾಣಿಕೆ | 2851-00-107-0-33 | 13.91 | | | | | 13.91 |
| 8 | ರೈತರಿಗೆ ತರಬೇತಿ | 2435-00-101-0-64 | 0.27 | 0.18 | 0.40 | 0.18 | 0.18 | 1.21 |
| | ಒಟ್ಟು | | 27.88 | 33.24 | 9.33 | 2.40 | 5.00 | 77.85 |
| | ಒಟ್ಟಾರೆ | | 533.16 | 786.44 | 242.31 | 196.88 | 185.30 | 1944.10 |

ತೋಟಗಾರಿಕೆ ಜಂಟಿ ನಿರ್ದೇಶಕರು
(ಯೋಜನೆ)

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 1522 |
| ವಿಧಾನಸಭೆ ಸದಸ್ಯರ ಹೆಸರು | : | ಶ್ರೀ ಕುಮಾರಸ್ವಾಮಿ ಹೆಚ್.ಕೆ.(ಸಕಲೇಶಪುರ) |
| ಉತ್ತರಿಸುವವರು | : | ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು |
| ಉತ್ತರಿಸುವ ದಿನಾಂಕ | : | 25-09-2020 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | KIADB ಮತ್ತು KSSIDC ವತಿಯಿಂದ ಸರ್ಕಾರದ ಆದೇಶವಾದಾಗಿನಿಂದ ಇಲ್ಲಿಯವರೆಗೆ ಮಂಜೂರಾದ ನಿರ್ವೇಶನ ಮತ್ತು ಶೆಡ್ಡುಗಳೆಷ್ಟು ಹಾಗೂ ಅವುಗಳ ವಿಸ್ತೀರ್ಣವೆಷ್ಟು; | ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ ವತಿಯಿಂದ ನಿಗಮವು ಸ್ಥಾಪನೆಯಾದಾಗಿನಿಂದ ಮಾರ್ಚ್-2020ರ ವರೆಗೆ ಒಟ್ಟು 3280.61 ಎಕರೆ ವಿಸ್ತೀರ್ಣದಲ್ಲಿ ಒಟ್ಟು 6437 ಸಂಖ್ಯೆ ವಿವಿಧ ಮಾದರಿಯ ಕೈಗಾರಿಕಾ ಮಳಿಗೆ/ಫ್ಲ್ಯಾಟ್/ಅಂಗಡಿ/ಗೋದಾಮುಗಳನ್ನು ನಿರ್ಮಿಸಲಾಗಿದೆ ಹಾಗೂ ವಿವಿಧ ಅಳತೆಯ 9688 ಸಂಖ್ಯೆ ಕೈಗಾರಿಕಾ ನಿವೇಶನಗಳನ್ನು ಅಭಿವೃದ್ಧಿಪಡಿಸಲಾಗಿದೆ.<br>ಇವುಗಳಲ್ಲಿ ಒಟ್ಟು 6220 ಕೈಗಾರಿಕಾ ಮಳಿಗೆಗಳನ್ನು ಮತ್ತು ಒಟ್ಟು 7958 ಕೈಗಾರಿಕಾ ನಿವೇಶನಗಳನ್ನು ಸಣ್ಣ ಕೈಗಾರಿಕೋದ್ಯಮಿಗಳಿಗೆ ಹಂಚಿಕೆ ಮಾಡಲಾಗಿರುತ್ತದೆ.<br>KSSIDC ವತಿಯಿಂದ ಹಂಚಿಕೆಯಾದ ನಿವೇಶನ/ಮಳಿಗೆಗಳ ವಿವರಗಳು ಈ ಕೆಳಕಂಡಂತಿವೆ:<br>ಕೆ.ಎಸ್.ಎಸ್.ಐ.ಡಿ.ಸಿ — ಮಳಿಗೆ: 6220; ನಿವೇಶನ: 7958<br>KIADB ವತಿಯಿಂದ ಹಂಚಿಕೆಯಾದ ನಿವೇಶನ/ಮಳಿಗೆಗಳ ವಿವರಗಳು ಈ ಕೆಳಕಂಡಂತಿವೆ:<br>ಕೆ.ಐ.ಎ.ಡಿ.ಬಿ — ನಿವೇಶನ: 6730; ವಿಸ್ತೀರ್ಣ (ಎಕರೆ): 12182.99 |
| ಆ) | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಉದ್ಯಮಿಗಳಿಗೆ ಮಂಜೂರಾದ ನ್ನಿವೇಶನ ಮತ್ತು ಶೆಡ್ಡುಗಳೆಷ್ಟು (ವಿವರ ನೀಡುವುದು) | KIADB ವತಿಯಿಂದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಉದ್ಯಮಿಗಳಿಗೆ ಹಂಚಿಕೆಯಾದ ನಿವೇಶನ/ಮಳಿಗೆಗಳ ವಿವರಗಳು ಈ ಕೆಳಕಂಡಂತಿವೆ:<br>ಕೆ.ಐ.ಎ.ಡಿ.ಬಿ — ಪರಿಶಿಷ್ಟ ಜಾತಿ: ಸಂಖ್ಯೆ. 1466, ವಿಸ್ತೀರ್ಣ (ಎಕರೆ) 936.51; ಪರಿಶಿಷ್ಟ ಪಂಗಡ: ಸಂಖ್ಯೆ. 384, ವಿಸ್ತೀರ್ಣ (ಎಕರೆ) 261.45<br>KSSIDC ವತಿಯಿಂದ ಹಂಚಿಕೆಯಾದ ನಿವೇಶನ/ಮಳಿಗೆಗಳ ವಿವರಗಳು ಕೆಳಕಂಡಂತಿವೆ:<br>ಕೆ.ಎಸ್.ಎಸ್.ಐ.ಡಿ.ಸಿ — ಪರಿಶಿಷ್ಟ ಜಾತಿ: ಮಳಿಗೆ 435, ನಿವೇಶನ 1024; ಪರಿಶಿಷ್ಟ ಪಂಗಡ: ಮಳಿಗೆ 82, ನಿವೇಶನ 227 |

Inner tables:

| ಕೆ.ಎಸ್.ಎಸ್.ಐ.ಡಿ.ಸಿ | ಮಳಿಗೆ | ನಿವೇಶನ |
|---|---|---|
| | 6220 | 7958 |

| ಕೆ.ಐ.ಎ.ಡಿ.ಬಿ | ನಿವೇಶನ | ವಿಸ್ತೀರ್ಣ (ಎಕರೆ) |
|---|---|---|
| | 6730 | 12182.99 |

| ಕೆ.ಐ.ಎ.ಡಿ.ಬಿ | ಪರಿಶಿಷ್ಟ ಜಾತಿ | | ಪರಿಶಿಷ್ಟ ಪಂಗಡ | |
|---|---|---|---|---|
| | ಸಂಖ್ಯೆ. | ವಿಸ್ತೀರ್ಣ (ಎಕರೆ) | ಸಂಖ್ಯೆ. | ವಿಸ್ತೀರ್ಣ (ಎಕರೆ) |
| | 1466 | 936.51 | 384 | 261.45 |

| ಕೆ.ಎಸ್.ಎಸ್.ಐ.ಡಿ.ಸಿ | ಪರಿಶಿಷ್ಟ ಜಾತಿ | | ಪರಿಶಿಷ್ಟ ಪಂಗಡ | |
|---|---|---|---|---|
| | ಮಳಿಗೆ | ನಿವೇಶನ | ಮಳಿಗೆ | ನಿವೇಶನ |
| | 435 | 1024 | 82 | 227 |

| | | |
|---|---|---|
| ಇ) | ಉದ್ಯಮಿಗಳನ್ನು ಪ್ರೋತ್ಸಾಹಿಸಲು ಶೇಕಡ 50 ರಷ್ಟು ಸಹಾಯಧನ ಘೋಷಿಸಿರುವುದು ನಿಜವೇ, ಹಾಗಿದ್ದಲ್ಲಿ, ಮಂಜೂರಾದ ಪ್ರಮಾಣವೆಷ್ಟು; | ಉದ್ಯಮಿಗಳನ್ನು ಪ್ರೋತ್ಸಾಹಿಸಲು ಶೇಕಡ 50 ರಷ್ಟು ಸಹಾಯಧನವನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಹಂಚಿಕೆದಾರರಿಗೆ ವಿಸ್ತರಿಸಲು ಆದೇಶ ಸಂಖ್ಯೆ: ಸಿಐ 81 ಸಿಎಸ್‌ಸಿ 2016, ಬೆಂಗಳೂರು, ದಿನಾಂಕ:27.06.2016 ಹೊರಡಿಸಲಾಗಿರುತ್ತದೆ.<br>KIADB ವತಿಯಿಂದ ಶೇ.50ರಷ್ಟು ಸಹಾಯಧನದಲ್ಲಿ ಮಂಜೂರಾದ ನಿವೇಶನ/ ಮಳಿಗೆ ವಿವರಗಳು ಕೆಳಕಂಡಂತಿವೆ: |

| ಕೆ.ಐ.ಎ.ಡಿ.ಬಿ | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | |
|---|---|---|---|---|---|---|
| | ಸಂಖ್ಯೆ | ವಿಸ್ತೀರ್ಣ (ಎಕರೆ) | 50 ರಷ್ಟು ಸಹಾಯಧನ (ರೂ.ಲಕ್ಷ ಗಳಲ್ಲಿ) | ಸಂಖ್ಯೆ | ವಿಸ್ತೀರ್ಣ (ಎಕರೆ) | 50 ರಷ್ಟು ಸಹಾಯಧನ (ರೂ. ಲಕ್ಷಗಳಲ್ಲಿ) |
| | 999 | 735.01 | 41599.17 | 315 | 225.89 | 11660.30 |

KSSIDC ವತಿಯಿಂದ ಶೇ.50ರಷ್ಟು ಸಹಾಯಧನದಲ್ಲಿ ಮಂಜೂರಾದ ನಿವೇಶನ/ ಮಳಿಗೆ ವಿವರಗಳು ಕೆಳಕಂಡಂತಿವೆ:

| ಕೆ.ಎಸ್.ಎಸ್.ಐ.ಡಿ.ಸಿ | ಪರಿಶಿಷ್ಟ ಜಾತಿ | | ಪರಿಶಿಷ್ಟ ಪಂಗಡ | |
|---|---|---|---|---|
| | ಮಳಿಗೆ/ ನಿವೇಶನ | 50 ರಷ್ಟು ಸಹಾಯಧನ (ರೂ.ಲಕ್ಷಗಳಲ್ಲಿ) | ಮಳಿಗೆ/ ನಿವೇಶನ | 50 ರಷ್ಟು ಸಹಾಯಧನ (ರೂ.ಲಕ್ಷಗಳಲ್ಲಿ) |
| | 398 | 2588.68 | 132 | 932.41 |

| | | |
|---|---|---|
| ಈ) | 2019-20ರ ಪರಿಶಿಷ್ಟ ಜಾತಿ ಉಪಯೋಜನೆ (SCSP) ಹಾಗೂ ಪ್ರವರ್ಗ ಉಪಯೋಜನೆ (TSP) ಅಡಿಯ ಅನುದಾನದಲ್ಲಿ ಸಹಾಯಧನ ಮಿತಿಯನ್ನು ಶೇಕಡ 50 ರಿಂದ ಶೇಕಡ 75ಕ್ಕೆ ಹೆಚ್ಚಿಸಬೇಕೆಂಬ ನಿರ್ಣಯ ರಾಜ್ಯ ಅಭಿವೃದ್ಧಿ ಪರಿಷತ್‌ನಲ್ಲಿ ತೆಗೆದುಕೊಳ್ಳಲಾಗಿದೆಯೇ; ಹಾಗಿದ್ದಲ್ಲಿ ನಿರ್ಣಯದಂತೆ ಆದೇಶ ನೀಡಲಾಗಿದೆಯೇ? (ವಿವರ ನೀಡುವುದು) | 2019-20ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಉಪಯೋಜನೆ (SCSP) ಹಾಗೂ ಪ್ರವರ್ಗ ಉಪಯೋಜನೆ (TSP) ಅಡಿಯ ಅನುದಾನದಲ್ಲಿ ಸಹಾಯಧನ ಮಿತಿಯನ್ನು ಶೇಕಡ 50 ರಿಂದ ಶೇಕಡ 75ಕ್ಕೆ ಹೆಚ್ಚಿಸಬೇಕೆಂಬ ನಿರ್ಣಯ ರಾಜ್ಯ ಅಭಿವೃದ್ಧಿ ಪರಿಷತ್‌ನಲ್ಲಿ ತೆಗೆದುಕೊಳ್ಳಲಾಗಿರುತ್ತದೆ. ತದನಂತರದಲ್ಲಿ ಆರ್ಥಿಕ ಇಲಾಖೆಯ ಸಮಾಲೋಚನೆ & ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆಯೊಂದಿಗೆ ಪರಿಶಿಷ್ಟ ಜಾತಿ ಉಪಯೋಜನೆ (SCSP) ಹಾಗೂ ಪ್ರವರ್ಗ ಉಪಯೋಜನೆ (TSP) ಅಡಿಯ ಅನುದಾನದಲ್ಲಿ ಸಹಾಯಧನ ಮಿತಿಯನ್ನು ಶೇಕಡ 50 ರಿಂದ ಶೇಕಡ 75ಕ್ಕೆ ಹೆಚ್ಚಿಸಿ ದಿನಾಂಕ: 28.05.2020 ರಿಂದ ಅನ್ವಯವಾಗುವಂತೆ ಕಛೇರಿ ಆದೇಶ ಹೊರಡಿಸಲಾಗಿರುತ್ತದೆ. (ಆದೇಶ ಪ್ರತಿಯನ್ನು ಲಗತ್ತಿಸಿದೆ). |

(ಜಗದೀಶ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು



<u>ಕರ್ನಾಟಕ ಸರ್ಕಾರದ ನಡವಳಿಗಳು</u>

ವಿಷಯ: ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಹಂಚಿಕೆ ಮಾಡುವ ಕೈಗಾರಿಕಾ ನಿವೇಶನಕ್ಕೆ ಹಾಲಿ ನೀಡುತ್ತಿರುವ ಸಹಾಯಧನವನ್ನು ಶೇಕಡ 50 ರಿಂದ ಶೇಕಡ 75ಕ್ಕೆ ಹೆಚ್ಚಿಸಿ ಜಾರಿಗೊಳಿಸುವ ಕುರಿತು.

ಓದಲಾಗಿದೆ:

1. ಸರ್ಕಾರಿ ಆದೇಶ ಸಂಖ್ಯೆ: ಸಿಐ 81 ಸಿ ಎಸ್ ಸಿ 2016, ದಿನಾಂಕ:27.06.2016.
2. ಸರ್ಕಾರದ ಉಪ ಕಾರ್ಯದರ್ಶಿ-1, ಸಮಾಜ ಕಲ್ಯಾಣ ಇಲಾಖೆ, ರವರ ಅನಧಿಕೃತ ಟಿಪ್ಪಣಿ ದಿನಾಂಕ:01.07.2019 ದೊಂದಿಗೆ ಲಗತ್ತಿಸಲಾದ ಸನ್ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಅನುಸೂಚಿತ ಅನುಸೂಚಿತ ಜಾತಿಗಳ ಉಪಹಂಚಿಕೆ ಮತ್ತು ಬುಡಕಟ್ಟುಗಳ ಉಪಹಂಚಿಕೆ(ಯೋಜನೆ ರೂಪಿಸುವುದು,ಆರ್ಥಿಕ ಸಂಪನ್ಮೂಲಗಳ ಹಂಚಿಕೆ ಮತ್ತು ಬಳಕೆ) ಅಧಿನಿಯಮ-2013 ರ ಪ್ರಕಾರ ದಿನಾಂಕ:04.06.2019 ರಂದು ನಡೆದ ರಾಜ್ಯ ಅನುಸೂಚಿತ ಜಾತಿಗಳ/ ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಿಷತ್ ಸಭೆಯ ನಡವಳಿಗಳು.
3. ಸರ್ಕಾರದ ಅಧೀನ ಕಾರ್ಯದರ್ಶಿ-1(ಪ್ರ), ಸಮಾಜ ಕಲ್ಯಾಣ ಇಲಾಖೆ ರವರ ಅನಧಿಕೃತ ಟಿಪ್ಪಣಿ ದಿನಾಂಕ:23.07.2019
4. ದಿನಾಂಕ 20-08-2019 ರಂದು ನಿರ್ದೇಶಕರು, ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
5. ಸರ್ಕಾರದ ಅಧೀನ ಕಾರ್ಯದರ್ಶಿ (ವೆಚ್ಚ-1 ಮತ್ತು ಬಂ.ಹೂ), ಆರ್ಥಿಕ ಇಲಾಖೆ ರವರ ಟಿಪ್ಪಣಿ ಸಂಖ್ಯೆ: FD 196 EXP-1/19, ದಿನಾಂಕ: 04.01.2019.
6. ಸರ್ಕಾರದ ಅಧೀನ ಕಾರ್ಯದರ್ಶಿ-1, ಸಮಾಜ ಕಲ್ಯಾಣ ಇಲಾಖೆ ರವರ ಅ.ಟಿ. ಸಂಖ್ಯೆ: ಸಕಇ 23 ಎಸ್ಎಲ್ ಪಿ 2020 ದೊಂದಿಗೆ ಲಗತ್ತಿಸಲಾದ ಮಾನ್ಯ ಉಪ ಮುಖ್ಯಮಂತ್ರಿಯವರು ಹಾಗೂ ಸಮಾಜ ಕಲ್ಯಾಣ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 19.03.2020 ರಂದು ನಡೆದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಕೈಗಾರಿಕಾ ನಿವೇಶನಗಳನ್ನು ಹಾಲಿ ಇರುವ ಸಹಾಯಧನ ಮಿತಿಯನ್ನು ಶೇಕಡ 50 ರಿಂದ ಶೇಕಡ 75ಕ್ಕೆ ಹೆಚ್ಚಿಸುವ ಬಗ್ಗೆ ನಡೆದ ಸಭಾ ನಡವಳಿಗಳು.

*****

<u>ಪ್ರಸ್ತಾವನೆ:</u>

**ಮೇಲೆ ಓದಲಾದ ಕ್ರಮ ಸಂಖ್ಯೆ (1)** ರ ಆದೇಶದಲ್ಲಿ 2016-17 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಲಾಗಿರುವಂತೆ ಪರಿಶಿಷ್ಟ ಜಾತಿ/ಪಂಗಡದ ಉದ್ಯಮಿಗಳಿಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆ.ಐ.ಎ.ಡಿ.ಬಿ) ಮತ್ತು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ (ಕೆ.ಎಸ್.ಎಸ್.ಐ.ಡಿ.ಸಿ) ಸಂಸ್ಥೆಗಳಿಂದ ಕೈಗಾರಿಕಾ ನಿವೇಶನ/ಮಳಿಗೆಗಳನ್ನು ಶೇ.50 ರ ರಿಯಾಯಿತಿ ದರದಲ್ಲಿ ಈ ಕೆಳಕಂಡ ನಿಬಂಧನೆಗಳಿಗೊಳಪಡಿಸಿ ಹಂಚಿಕೆ ಮಾಡಲು ಅನುಮೋದನೆ ನೀಡಲಾಗಿದೆ.

- ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಹಂಚಿಕೆಯಾಗುವ ಕೈಗಾರಿಕಾ ನಿವೇಶನ/ಮಳಿಗೆಯ ಶೇ.50 ರ ರಿಯಾಯಿತಿ ಮೌಲ್ಯವನ್ನು ಸರ್ಕಾರದಿಂದ ಸಂಬಂಧಿಸಿದ ಸಂಸ್ಥೆಗಳಿಗೆ (ಕೆ.ಎಸ್.ಎಸ್.ಐ.ಡಿ.ಸಿ/ಕೆ.ಐ.ಎ.ಡಿ.ಬಿ) ಪಾವತಿ ಮಾಡುವುದು.

- ಈ ಶೇ.50ರ ರಿಯಾಯಿತಿ ಮೌಲ್ಯವನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವಿಶೇಷ ಘಟಕ ಯೋಜನೆ/ಗಿರಿಜನ ಉಪಯೋಜನೆ (SCSP/TSP) ಅಡಿಯಲ್ಲಿ ಹಂಚಿಕೆಯಾಗುವ ಆಯವ್ಯಯದಿಂದ ಭರಿಸತಕ್ಕದ್ದು ಮತ್ತು (SCSP/TSP) ಯೋಜನೆಯಡಿಯಲ್ಲಿ ಈ ಕಾರ್ಯಕ್ರಮಕ್ಕೆ ರೂಪಿಸಲಾಗಿರುವ ಮಾರ್ಗಸೂಚಿಗಳನ್ನು ಪಾಲಿಸತಕ್ಕದ್ದು.

- ಹಂಚಿಕೆ ಪಡೆದ ಉದ್ದಿಮೆದಾರರಿಂದ ನಿವೇಶನ/ಮಳಿಗೆಯ ಶೇ.25ರಷ್ಟು ಮೌಲ್ಯವನ್ನು ಮೊದಲು (Upfront) ಸಂಬಂಧಿಸಿದ ಸಂಸ್ಥೆಗಳು ಪಡೆದುಕೊಳ್ಳತಕ್ಕದ್ದು. ನಂತರ, ಉಳಿದ ಶೇ.25 ರಷ್ಟು ನಿವೇಶನ/ಮಳಿಗೆಯ ಮೌಲ್ಯದ ಮೊತ್ತವನ್ನು 8 ಸಮ ತ್ರೈಮಾಸಿಕ ಕಂತುಗಳಲ್ಲಿ ಸೂಕ್ತ ಬಡ್ಡಿ ದರದೊಂದಿಗೆ ವಸೂಲಾತಿ ಮಾಡಿಕೊಳ್ಳತಕ್ಕದ್ದು.

**ಮೇಲೆ ಓದಲಾದ ಕ್ರಮ ಸಂಖ್ಯೆ (2)** ರ ಸರ್ಕಾರದ ಉಪ ಕಾರ್ಯದರ್ಶಿ-1, ಸಮಾಜ ಕಲ್ಯಾಣ ಇಲಾಖೆ, ರವರ ಅನಧಿಕೃತ ಟಿಪ್ಪಣಿಯೊಂದಿಗೆ ಲಗತ್ತಿಸಲಾಗಿರುವ ಸನ್ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಅನುಸೂಚಿತ ಜಾತಿಗಳ ಉಪಹಂಚಿಕೆ ಮತ್ತು ಬುಡಕಟ್ಟುಗಳ ಉಪಹಂಚಿಕೆ (ಯೋಜನೆ ರೂಪಿಸುವುದು,ಆರ್ಥಿಕ ಸಂಪನ್ಮೂಲಗಳ ಹಂಚಿಕೆ ಮತ್ತು ಬಳಕೆ) ಅಧಿನಿಯಮ-2013 ರ ಪ್ರಕಾರ ದಿನಾಂಕ: 04.06.2019 ರಂದು ನಡೆದ ರಾಜ್ಯ ಅನುಸೂಚಿತ ಜಾತಿಗಳ/ ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಿಷತ್ ಸಭೆಯ ನಡವಳಿಗಳಲ್ಲಿ ಕೈಗಾರಿಕಾ ನಿವೇಶನ ನೀಡುವಲ್ಲಿ ಹಾಲಿ ಇರುವ ಸಹಾಯಧನ ಮಿತಿಯನ್ನು ಶೇ.50 ರಿಂದ ಶೇ.75 ಕ್ಕೆ ಹೆಚ್ಚಿಸಲು ಅನುಮೋದನೆ ನೀಡಲಾಗಿದೆ.

**ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಅನಧಿಕೃತ ಟಿಪ್ಪಣಿಯಲ್ಲಿ ವಿವರಿಸಲಾಗಿರುವಂತೆ,** ಪರಿಶಿಷ್ಟ ಜಾತಿ/ಪಂಗಡದ ಅನೇಕ ನಿರುದ್ಯೋಗಿ ಯುವಕ/ಯುವತಿಯರು ನಿವೇಶನ ಮಂಜೂರಾಗಿದ್ದರೂ ಸಹ ಹಣವನ್ನು ಪಾವತಿಸಲು ಸಾಧ್ಯವಾಗುವುದಿಲ್ಲವೆಂದು ಕೋರಿ ಕೆಲವು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಶಾಸಕರು ಮಾನ್ಯ ಮುಖ್ಯಮಂತ್ರಿಯವರಿಗೆ ಮನವಿ ಸಲ್ಲಿಸಿದ್ದು, ಸದರಿ ಸೌಲಭ್ಯವನ್ನು 2018-19 ನೇ ಸಾಲಿನಿಂದ ಪೂರ್ವಾನ್ವಯವಾಗಿ ಜಾರಿಗೊಳಿಸಲು ಆದೇಶ ಹೊರಡಿಸಲು ಕೋರಲಾಗಿರುತ್ತದೆ.

**ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ** ದಿನಾಂಕ: 20.08.2019 ರಂದು ನಿರ್ದೇಶಕರು, ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಕೈಗಾರಿಕಾ ನಿವೇಶನ ನೀಡುವಲ್ಲಿ ಹಾಲಿ ಇರುವ ಸಹಾಯಧನ ಮಿತಿಯನ್ನು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳೊಂದಿಗೆ ಶೇ.50% ರಿಂದ ಶೇ 75%ಕ್ಕೆ ಹೆಚ್ಚಿಸಿ ಜಾರಿಗೊಳಿಸುವ ಕುರಿತಂತೆ ಚರ್ಚಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿರುತ್ತದೆ:

- ಒಬ್ಬ ಉದ್ಯಮಿಗೆ ಒಂದು ಬಾರಿಗೆ ಮಾತ್ರ ಗರಿಷ್ಠ 2 ಎಕರೆ ಕೈಗಾರಿಕಾ ನಿವೇಶನಕ್ಕೆ ಶೇ.75 ರಂತೆ ರಿಯಾಯಿತಿ ದರದಲ್ಲಿ ಜಿಲ್ಲೆಗಳಲ್ಲಿ ಹಂಚಿಕೆ ಮಾಡಬಹುದು. ಆದರೆ, ಬೆಂಗಳೂರು (ನಗರ) ಮತ್ತು ಬೆಂಗಳೂರು (ಗ್ರಾಮಾಂತರ) ಜಿಲ್ಲೆಗಳಲ್ಲಿ ಭೂಮಿಯ ಬೆಲೆಯು ದುಬಾರಿಯಾಗುವುದರಿಂದ ಗರಿಷ್ಠ 1 ಎಕರೆ ಕೈಗಾರಿಕಾ ನಿವೇಶನಕ್ಕೆ ಸೀಮಿತಗೊಳಿಸಿದಂತೆ ರಿಯಾಯಿತಿ ದರವನ್ನು ಪರಿಗಣಿಸುವುದು.
- ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಹಂಚಿಕೆಯಾಗುವ ಕೈಗಾರಿಕಾ ನಿವೇಶನಗಳನ್ನು ಮೂಲಭೂತ ಸೌಕರ್ಯ ಕಲ್ಪಿಸಿ ಪೂರ್ಣ ಪ್ರಮಾಣದಲ್ಲಿ ಉದ್ದಿಮೆ ಸ್ಥಾಪನೆಗೆ ಗರಿಷ್ಠ 3 ವರ್ಷಗಳ ಕಾಲ ಅವಕಾಶ ನೀಡುವುದು.
- ಉದ್ದಿಮೆಯನ್ನು ಯಾವುದೇ ಸಂವಿಧಾನದಡಿ ಸ್ಥಾಪಿಸಿದಲ್ಲಿ ಎಲ್ಲಾ ಸ್ಥಾಪಕರು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು.
- ಹಂಚಿಕೆ ಪತ್ರದಲ್ಲಿನ ಮೊತ್ತದ ಶೇ.10 ರಷ್ಟು ಮೊತ್ತವನ್ನು ಮಾತ್ರ ಪಾವತಿಸಿ ನಂತರ ನಿವೇಶನವನ್ನು ಫಲಾನುಭವಿಗೆ ಸ್ವಾಧೀನ ಪತ್ರದ ಮೂಲಕ ನೀಡಿ ಉಳಿದ ಶೇ.15 ರಷ್ಟು ಮೊತ್ತವನ್ನು ಸ್ವಾಧೀನ ಪತ್ರ ವಿತರಿಸಿದ ದಿನಾಂಕದಿಂದ 8 ತ್ರೈಮಾಸಿಕ ಸಮ ಕಂತುಗಳಲ್ಲಿ ನಿಗಮ ಹಾಗೂ ಮಂಡಳಿಯು ಫಲಾನುಭವಿಯಿಂದ ಪಡೆಯುವುದು.
- ಸದರಿ ನಿಯಮಾವಳಿಯಂತೆ ಕೈಗಾರಿಕಾ ನಿವೇಶನವನ್ನು 10 ವರ್ಷಗಳ ಅವಧಿಗೆ ಲೀಸ್ ಕಂ ಸೇಲ್ ಆಧಾರದ ಮೇಲೆ ಸ್ವಾಧೀನ ನೀಡಲಾಗುತ್ತಿದ್ದು, ಇದನ್ನು 12 ವರ್ಷಗಳ ಅವಧಿಗೆ ವಿಸ್ತರಿಸಿ ನಿಗಧಿಪಡಿಸುವುದು.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಅನಧಿಕೃತ ಟಿಪ್ಪಣಿಯಲ್ಲಿ ಲಗತ್ತಿಸಿರುವ ಮಾನ್ಯ ಉಪ ಮುಖ್ಯಮಂತ್ರಿಯವರು ಹಾಗೂ ಸಮಾಜ ಕಲ್ಯಾಣ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 19.03.2020 ರಂದು ನಡೆದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಕೈಗಾರಿಕಾ ನಿವೇಶನಗಳನ್ನು ಹಾಲಿ ಇರುವ ಸಹಾಯಧನ ಮಿತಿಯನ್ನು ಶೇಕಡ 50 ರಿಂದ ಶೇಕಡ 75ಕ್ಕೆ ಹೆಚ್ಚಿಸುವ ಬಗ್ಗೆ ನಡೆದ ಸಭಾ ನಡವಳಿಗಳನ್ನು ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗಿರುತ್ತದೆ.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

<u>ಸರ್ಕಾರಿ ಆದೇಶ ಸಂಖ್ಯೆ: ಸಿಐ 76 ಸಪ್ರಕೈ 2019, ಬೆಂಗಳೂರು, ದಿನಾಂಕ: 28.05.2020</u>

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಕೈಗಾರಿಕಾ ನಿವೇಶನ ನೀಡುವಲ್ಲಿ ಹಾಲಿ ಇರುವ ಸಹಾಯಧನವನ್ನು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳೊಂದಿಗೆ ಶೇಕಡ 50 ರಿಂದ ಶೇಕಡ 75 ಕ್ಕೆ ಹೆಚ್ಚಿಸಿ ಜಾರಿಗೊಳಿಸಲಾಗಿದೆ:

1. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಹಂಚಿಕೆಯಾಗುವ ಕೈಗಾರಿಕಾ ನಿವೇಶನಗಳನ್ನು ಮೂಲಭೂತ ಸೌಕರ್ಯ ಕಲ್ಪಿಸಿ ಪೂರ್ಣ ಪ್ರಮಾಣದಲ್ಲಿ ಉದ್ದಿಮೆ ಸ್ಥಾಪನೆಗೆ ಗರಿಷ್ಠ 3 ವರ್ಷಗಳ ಕಾಲಾವಕಾಶ ನೀಡುವುದು.

2. ಉದ್ದಿಮೆಯನ್ನು ಯಾವುದೇ ಸಂವಿಧಾನದಡಿ ಸ್ಥಾಪಿಸಿದಲ್ಲಿ ಎಲ್ಲಾ ಸ್ಥಾಪಕರು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರತಕ್ಕದ್ದು.

3. ಹಂಚಿಕೆ ಪತ್ರದಲ್ಲಿನ ಮೊತ್ತದ ಶೇ.10 ರಷ್ಟು ಮೊತ್ತವನ್ನು ಮಾತ್ರ ಪಾವತಿಸಿ ನಂತರ ನಿವೇಶನವನ್ನು ಫಲಾನುಭವಿಗೆ ಸ್ವಾಧೀನ ಪತ್ರದ ಮೂಲಕ ನೀಡಿ ಉಳಿದ ಶೇ.15 ರಷ್ಟು ಮೊತ್ತವನ್ನು ಸ್ವಾಧೀನ ಪತ್ರ ವಿತರಿಸಿದ ದಿನಾಂಕದಿಂದ 8 ತ್ರೈಮಾಸಿಕ ಸಮ ಕಂತುಗಳಲ್ಲಿ ನಿಗಮ ಹಾಗೂ ಮಂಡಳಿಯು ಫಲಾನುಭವಿಯಿಂದ ವಸೂಲಾತಿ ಮಾಡಿಕೊಳ್ಳತಕ್ಕದ್ದು.

4. ಕೈಗಾರಿಕಾ ನಿವೇಶನವನ್ನು 10 ವರ್ಷಗಳ ಅವಧಿಗೆ ಲೀಸ್ ಕಂ ಸೇಲ್ ಆಧಾರದ ಮೇಲೆ ಹಂಚಿಕೆ ಮಾಡುವುದು ಹಾಗೂ ಈ ಅವಧಿಯಲ್ಲಿ ವರ್ಗಾಯಿಸಲು ಸಾಧ್ಯವಿಲ್ಲ.

5. ನಿವೇಶನ (ಎ&ಬಿ ಶೆಡ್ ಸೇರಿ) ನೀಡುವ ದರದಲ್ಲಿ 75% ರಷ್ಟು ಅಥವಾ ಗರಿಷ್ಠ ರೂ. 2.00 ಕೋಟಿ ಸಹಾಯಧನ ಮಿತಿಯೊಳಗೆ ಯಾವುದು ಕಡಿಮೆಯೋ ಅದನ್ನು ನೀಡುವುದು. ಸಹಾಯಧನ ಹೊರತುಪಡಿಸಿ ಉಳಿದ ವೆಚ್ಚವನ್ನು ಫಲಾನುಭವಿಗಳು ಭರಿಸುವುದು. ಸದರಿ ಸೌಲಭ್ಯವನ್ನು ಎಸ್.ಸಿ/ಎಸ್.ಟಿ ಉದ್ದಿಮೆದಾರರಿಗೆ ಮೀಸಲಿರಿಸಿರುವ ಮಳಿಗೆಗಳಿಗೂ ವಿಸ್ತರಿಸುವುದು.

6. ಒಂದು ಉದ್ಯಮಿಗೆ ಗರಿಷ್ಠ 2 ಎಕರೆ ಕೈಗಾರಿಕಾ ನಿವೇಶನಕ್ಕೆ ಶೇ.75 ರಂತೆ ರಿಯಾಯಿತಿ ದರದಲ್ಲಿ ಹಂಚಿಕೆ ಮಾಡುವುದು. ಒಬ್ಬರೇ ಉದ್ಯಮಿಯು ಹಲವು ಕಂಪನಿಗಳಿಗೆ ಪ್ರವರ್ತಕರಾಗಿದ್ದಲ್ಲಿ, ಒಂದು ಬಾರಿ ಮಾತ್ರ ಈ ಸೌಲಭ್ಯ ನೀಡುವುದು ಮತ್ತು ಒಂದು ಕುಟುಂಬದಲ್ಲಿ ಒಬ್ಬರಿಗೆ ಮಾತ್ರ ಈ ಸೌಲಭ್ಯ ನೀಡುವುದು.

7. 75% ರಷ್ಟು ಸಹಾಯಧನದ ಯೋಜನೆಯು ಹೊಸದಾಗಿ ಕೈಗಾರಿಕಾ ನಿವೇಶನ ಹಂಚಿಕೆ ಮಾಡುವ ಪ್ರಕರಣಗಳಿಗೆ ಅನ್ವಯಿಸುತ್ತದೆ. ಆದರೆ, 2019-20ನೇ ಸಾಲಿನಲ್ಲಿ 50% ಸಹಾಯಧನ ಯೋಜನೆಯಡಿ ಈಗಾಗಲೇ ಕೈಗಾರಿಕಾ ನಿವೇಶನಗಳನ್ನು ಪಡೆದು ನಿಯಮಾನುಸಾರ ಒಡಂಬಡಿಕೆ ಮತ್ತು ಪಾವತಿ ಇತ್ಯಾದಿ ಮಾಡಿರುವ ಪ್ರಕರಣಗಳನ್ನು ಅದೇ ಮಿತಿಯಲ್ಲಿ ಮುಂದುವರೆಸುವುದು.

8. ಭೂ ಸಹಾಯಧನ ಹೊರತುಪಡಿಸಿದ ಇತರೆ ಸಹಾಯಧನ /ರಿಯಾಯಿತಿಗಳನ್ನು ಚಾಲ್ತಿಯಲ್ಲಿರುವ ಕೈಗಾರಿಕಾ ನೀತಿಯ ಪ್ರಕಾರ ನೀಡುವುದು.

ಇಲಾಖೆಯು/ ಜಾರಿಗೊಳಿಸುವ ಸಂಸ್ಥೆಯು ಎಸ್ ಸಿಪಿ/ಟಿಎಸ್ ಪಿ ಯೋಜನೆಯಡಿ ಸದರಿ ಯೋಜನೆಗೆ ಆಯಾ ವರ್ಷ ಲಭ್ಯವಿರುವ ಆಯವ್ಯಯಕ್ಕೆ ಅನುಗುಣವಾಗಿ ಫಲಾನುಭವಿ ಘಟಕಗಳ ಸಂಖ್ಯೆಯನ್ನು ನಿರ್ಬಂಧಿಸುವುದು ಮತ್ತು ಮುಂಬರುವ ವರ್ಷಗಳಲ್ಲಿ ಆಯವ್ಯಯವನ್ನು ನಿರೀಕ್ಷಿಸಿ ಸದರಿ ಯೋಜನೆಗೆ ವೆಚ್ಚ (committed liability) ಉಂಟುಮಾಡಬಾರದು. ಈ ಕುರಿತು ಪ್ರತ್ಯೇಕ ಮಾನದಂಡಗಳನ್ನು ಹೊರಡಿಸಲಾಗುವುದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: FD 196 EXP-1/19, ದಿನಾಂಕ: 04.01.2019 ರಲ್ಲಿ ಷರತ್ತುಗಳೊಂದಿಗೆ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

Rlatha

**[ಆರ್.ಲತಾ]**
**ಪೀಠಾಧಿಕಾರಿ [ಸಪ್ರಕೈ],**
**ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.**

**ಇವರಿಗೆ:**

**ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ಇವರಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲು ಕೋರಿ ಕಳುಹಿಸಲಾಗಿದೆ. ತದನಂತರ, ಪ್ರಕಟಗೊಂಡ ಸಂಚಿಕೆಗಳ 25 ಪ್ರತಿಗಳನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿದೆ.**

**ಪ್ರತಿಯನ್ನು:**

1. ಪ್ರಧಾನ ಮಹಾಲೇಖಪಾಲರು (ಜಿ & ಎಸ್ಎಸ್ಎ) ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ', ಅಂಚೆ ಪೆಟ್ಟಿಗೆ ಸಂಖ್ಯೆ: 5398, ಬೆಂಗಳೂರು-560001.
2. ಪ್ರಧಾನ ಮಹಾಲೇಖಪಾಲರು (ಇ & ಆರ್ ಎಸ್ ಎ) ಕರ್ನಾಟಕ, ಹೊಸ ಕಟ್ಟಡ, 'ಆಡಿಟ್ ಭವನ', ಅಂಚೆ ಪೆಟ್ಟಿಗೆ ಸಂಖ್ಯೆ: 5398, ಬೆಂಗಳೂರು-560001.
3. ಪ್ರಧಾನ ಮಹಾಲೇಖಪಾಲರು (ಎ & ಇ) ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ: 5329, ಬೆಂಗಳೂರು-560001.
4. ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು-01.
5. ಸರ್ಕಾರದ ಪ್ರಧಾನ ಕಾರ್ಯದರ್ಶಿ ,ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು-01.
6. ಸರ್ಕಾರದ ಪ್ರಧಾನ ಕಾರ್ಯದರ್ಶಿ (ಎಂ ಎಸ್ ಎಂ ಇ, ಗಣಿ ಮತ್ತು ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು-01.
7. ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ವಿಕಾಸಸೌಧ, ಬೆಂಗಳೂರು-01.
8. ಆಯುಕ್ತರು, ಕೈಗಾರಿಕಾಭಿವೃದ್ಧಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಖನಿಜ ಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು-1.
9. ನಿರ್ದೇಶಕರು (ಎಂ.ಎಸ್.ಎಂ.ಇ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಖನಿಜ ಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು-1.
10. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಕಾರ್ಯ ನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (KIADB), ರಾಷ್ಟ್ರೋತ್ಥಾನ ಪರಿಷತ್ ಭವನ, ನೃಪತುಂಗ ರಸ್ತೆ, ಬೆಂಗಳೂರು-01.

11. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ (KSSIDC), ಕೈಗಾರಿಕಾ ವಸಾಹತು, ರಾಜಾಜಿನಗರ, ಬೆಂಗಳೂರು.

10. ಹಿರಿಯ ನಿರ್ದೇಶಕರು (ಪಿಎಫ್ಆರ್), ಯೋಜನಾ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು-1.
11. ನಿರ್ದೇಶಕರು, ಖಜಾನೆ ಇಲಾಖೆ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಬೆಂಗಳೂರು-1.
12. ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರ ಆಪ್ತ ಕಾರ್ಯದರ್ಶಿ,ವಿಧಾನಸೌಧ, ಬೆಂಗಳೂರು-01.
13. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ-1), ವಿಧಾನಸೌಧ, ಬೆಂಗಳೂರು-01.
14. ಸರ್ಕಾರದ ಅಧೀನ ಕಾರ್ಯದರ್ಶಿ(ಸಮನ್ವಯ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು-01.(ಮಲ್ಟಿಗ್ರಾಫ್ ಹಾಗೂ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಿಗೆ ಕಳುಹಿಸುವ ಸಲುವಾಗಿ)
15. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1530

ಸದಸ್ಯರ ಹೆಸರು : ಶ್ರೀ ಉಮಾನಾಥ.ಎ.ಕೋಟ್ಯಾನ್ (ಮೂಡಬಿದ್ರೆ)

ಉತ್ತರಿಸಬೇಕಾದ ದಿನಾಂಕ : 25/09/2020

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಮಂಗಳೂರು ಬೈಕಂಪಾಡಿ ಎಪಿಎಂಸಿ ಮಾರುಕಟ್ಟೆ ಪ್ರಾಂಗಣವನ್ನು ಪ್ರಮುಖ ವ್ಯಾಪಾರ ಚಟುವಟಿಕೆ ಕೇಂದ್ರವನ್ನಾಗಿ ಪರಿವರ್ತಿಸಿ ಬಲವರ್ಧನೆ ಮಾಡಿ ಕಾರ್ಯನಿರ್ವಹಿಸಲು ತೆಗೆದುಕೊಂಡಿರುವ ಕ್ರಮಗಳೇನು; ಸರ್ಕಾರದ ಮುಂದಿರುವ ಪರಿಣಾಮಕಾರಿ ಪ್ರಸ್ತಾವನೆಗಳೇನು; | ಬೈಕಂಪಾಡಿ ಮಾರುಕಟ್ಟೆ ಪ್ರಾಂಗಣವನ್ನು ಸದ್ಬಳಕೆ ಮಾಡಿಕೊಳ್ಳುವ ನಿಟ್ಟಿನಲ್ಲಿ ಮಾರುಕಟ್ಟೆಯನ್ನು ವಿಸ್ತರಿಸಲು ಸ್ಥಳೀಯ ಜನಪ್ರತಿನಿಧಿಗಳು ಹಾಗೂ ಅಧಿಕಾರಿಗಳನ್ನೊಳಗೊಂಡ ಉಪ ಸಮಿತಿಯನ್ನು ನೇಮಿಸಲಾಗಿರುತ್ತದೆ.<br><br>ಸದರಿ ಉಪ ಸಮಿತಿಯ ಪ್ರಸ್ತಾವನೆಯಂತೆ ಪ್ರಾಂಗಣದ ಸದ್ಬಳಕೆ ಮಾಡಿಕೊಳ್ಳುವ ನಿಟ್ಟಿನಲ್ಲಿ ಮಾರುಕಟ್ಟೆಯನ್ನು ವಿಸ್ತರಿಸಲು ಅನುವಾಗುವಂತೆ ಆಹಾರ ಸಂಸ್ಕರಣೆ ಘಟಕ ಸ್ಥಾಪನೆ, ರಫ್ತು ವಲಯಕ್ಕೆ ಮೂಲ ಸೌಕರ್ಯ ಅಭಿವೃದ್ಧಿ ಹಾಗೂ ಕೋಲ್ಡ್ ಸ್ಟೋರೇಜ್ ನಿರ್ಮಾಣ ಇವುಗಳ ಬಗ್ಗೆ ಡಿಮ್ಯಾಂಡ್ ಸರ್ವೇ ನಡೆಸಿ ವರದಿ ನೀಡಲು ಎಕ್ಸ್‌ಪ್ರೆಶನ್ ಆಫ್ ಇಂಟರೆಸ್ಟ್ ಸಂಬಂಧ ಪತ್ರಿಕಾ ಪ್ರಕಟಣೆ ಹೊರಡಿಸಲು ಅನುಮತಿ ನೀಡಲಾಗಿದೆ. |
| ಆ. | ಈ ಕುರಿತಾಗಿ ಕ್ರಮ ವಹಿಸಲು ರಾಜ್ಯ ಸರ್ಕಾರ ನಿಗದಿತ ಕಾಲಾವಧಿಯೊಳಗೆ ಪೂರ್ಣಗೊಳ್ಳುವಂತಹ ಯಾವುದಾದರೂ ಕ್ರಿಯಾ ಯೋಜನೆ ಕೈಗೊಂಡಿದೆಯೇ; ಹಾಗಿದ್ದಲ್ಲಿ, ಯೋಜನಾ ವಿವರ ನೀಡುವುದು; | 2019-20ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಯಡಿ ಅಂದಾಜು ರೂ.600 ಲಕ್ಷ ಮೊತ್ತದ 05 ಕಾಮಗಾರಿಗಳನ್ನು ಮತ್ತು ರೂ.60.00 ಲಕ್ಷ ಮೊತ್ತದ 26 ಕಾಮಗಾರಿಗಳನ್ನು ಕೈಗೊಳ್ಳಲು ಮಂಜೂರಾತಿ ನೀಡಲಾಗಿದೆ. (ಕಾಮಗಾರಿಗಳ ವಿವರಗಳನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ) |
| ಇ. | ರಾಜ್ಯದ ಕೃಷಿ ಮಾರುಕಟ್ಟೆ ಶುಲ್ಕ ವಸೂಲಾತಿ ಕ್ರಮಗಳ ಕುರಿತಾಗಿ ವಿವರಗಳೊಂದಿಗೆ ಎಪಿಎಂಸಿಗಳ ಸಮಗ್ರ ಅಭಿವೃದ್ಧಿಗಾಗಿ ಸರ್ಕಾರದ ಕಾಲನಿಗದಿತ ಕ್ರಮಗಳೇನು? | ಅಧಿಸೂಚಿತ ಕೃಷಿ ಉತ್ಪನ್ನಗಳ ಮಾರಾಟದ ಮೇಲಿನ ಮಾರುಕಟ್ಟೆ ಶುಲ್ಕವನ್ನು ಶೇ.1.5 ರಿಂದ ಶೇ.1ಕ್ಕೆ ಇಳಿಸಲಾಗಿತ್ತು. ತದನಂತರ ಅಧಿಸೂಚಿತ ಕೃಷಿ ಉತ್ಪನ್ನಗಳ ಮಾರಾಟದ ಮೇಲಿನ ಮಾರುಕಟ್ಟೆ ಶುಲ್ಕ / ಬಳಕೆದಾರರ ಶುಲ್ಕವನ್ನು ಶೇ.1 ರಿಂದ ಶೇ.0.35ಕ್ಕೆ ಮರು ನಿಗದಿಪಡಿಸಲಾಗಿದೆ. ಒಣದ್ರಾಕ್ಷಿಗೆ ಹಾಲಿ ಇರುವ ಶೇ.0.10ನ್ನು ಮುಂದುವರೆಸಲಾಗಿದೆ.<br><br>ಮಾರುಕಟ್ಟೆ ಸಮಿತಿಗಳ ಅಭಿವೃದ್ಧಿಗಾಗಿ ಸ್ಥಳೀಯ ಜನಪ್ರತಿನಿಧಿಗಳು ಹಾಗೂ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.<br><br>ಕೃಷಿ ಮಾರಾಟ ಇಲಾಖೆ ಪುನರ್ ರಚನೆ ಹಾಗೂ ಮಾರುಕಟ್ಟೆ ಸಮಿತಿಗಳ ಸಂಪನ್ಮೂಲ ಕ್ರೋಢೀಕರಣ ಸಂಬಂಧ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966, ನಿಯಮಾವಳಿ 1968 ಹಾಗೂ ಆಸ್ತಿ ಹಂಚಿಕೆ ನಿಯಮಾವಳಿ 2004ಕ್ಕೆ ಸೂಕ್ತ ತಿದ್ದುಪಡಿಗೆ ಕ್ರಮ ಕೈಗೊಳ್ಳಲಾಗಿದೆ.<br><br>ಮಾರುಕಟ್ಟೆ ಪ್ರಾಂಗಣಗಳ ಸ್ವಚ್ಛತೆ, ಭದ್ರತೆ, ಕಛೇರಿ ನಿರ್ವಹಣೆ, ವಾಹನಗಳ ನಿರ್ವಹಣೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಸಮಿತಿಗಳ ಸಂಪನ್ಮೂಲಕ್ಕೆ ಅನುಗುಣವಾಗಿ ಸಮಿತಿಗಳಿಂದ ನಿರ್ವಹಿಸಲಾಗುತ್ತಿದೆ. |

ಎಸ್.ಟಿ. ಸೋಮಶೇಖರ್

(ಎಸ್.ಟಿ. ಸೋಮಶೇಖರ್)

ಸಹಕಾರ ಸಚಿವರು.

ಕಡತ ಸಂಖ್ಯೆ: ಸಇ 481 ಎಂಆರ್ಇ 2020

ಅನುಬಂಧ-1

1530

## ಅನುಬಂಧ-1

## ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಂಗಳೂರು

## 2019-20ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಯಡಿ ಕೈಗೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳು

| ಕ್ರ.ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಲಕ್ಷಗಳಲ್ಲಿ) |
|---|---|---|
| 1 | ಬೈಕಂಪಾಡಿ ಮಾರುಕಟ್ಟೆ ಪ್ರಾಂಗಣದ ವಾಣಿಜ್ಯ ಸಂಕೀರ್ಣ, ಗೋದಾಮುಗಳು, ಶೌಚಾಲಯ ಹಾಗೂ ಕಂಪೌಂಡ್ ಗೋಡೆ ದುರಸ್ತಿ ಕಾಮಗಾರಿ | 500.00 |
| 2 | ಬೈಕಂಪಾಡಿ ಮಾರುಕಟ್ಟೆ ಪ್ರಾಂಗಣದಲ್ಲಿ ಎಲ್.ಇ.ಡಿ ಬೀದಿ ದೀಪಗಳನ್ನು ಹಾಗೂ ಎಲ್.ಟಿ ಎ.ಬಿ.ಸಿ ಕೇಬಲ್‌ಗಳನ್ನು ಹಾಲಿ ಇರುವ ಕಂಬಗಳಿಗೆ ಅಳವಡಿಸುವ ಕಾಮಗಾರಿ | 25.00 |
| 3 | ಬೈಕಂಪಾಡಿ ಮಾರುಕಟ್ಟೆ ಪ್ರಾಂಗಣದಲ್ಲಿರುವ ಗೋದಾಮುಗಳಿಗೆ ವಿದ್ಯುತ್ ಒದಗಿಸಲು ಎಲ್.ಟಿ ಎ.ಬಿ.ಸಿ ಕೇಬಲ್‌ಗಳನ್ನು ಹಾಲಿ ಇರುವ ಕಂಬಗಳಿಗೆ ಅಳವಡಿಸುವ ಕಾಮಗಾರಿ | 25.00 |
| 4 | ಹಾಲಿ ಇರುವ ಎಂ.ಎಸ್ ಟವರ್‌ಗಳಿಗೆ ಎಲ್.ಇ.ಡಿ ಫ್ಲಡ್ ಲೈಟ್‌ಗಳನ್ನು ಅಳವಡಿಸುವುದು ಮತ್ತು ಹೆಚ್ಚುವರಿ 250 ಕೆ.ವಿ ಜನರೇಟರ್‌ನ್ನು ವಾಣಿಜ್ಯ ಸಂಕೀರ್ಣದಲ್ಲಿ ಅಳವಡಿಸುವುದು | 25.00 |
| 5 | ಬೈಕಂಪಾಡಿ ಮಾರುಕಟ್ಟೆ ಪ್ರಾಂಗಣದಲ್ಲಿರುವ ವಾಣಿಜ್ಯ ಸಂಕೀರ್ಣ ಅಭಿವೃದ್ಧಿಪಡಿಸುವುದು ಮತ್ತು ಮಹಡಿವಾರು ವಿದ್ಯುತ್ ಕಂಟ್ರೋಲ್ ಪ್ಯಾನಲ್‌ಗಳನ್ನು ಅಳವಡಿಸುವುದು | 25.00 |
| | ಒಟ್ಟು | 600.00 |

## ನಿಯಮ 60(ಸಿ)ರಡಿ ಹೊಸ ಕಾಮಗಾರಿಗಳು

| ಕ್ರ.ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ |
|---|---|---|
| 1 | ಬಳ್ಕುಂಜ ಗ್ರಾಮ ಪಂಚಾಯತ್, ಬಳ್ಕುಂಜೆ ಗ್ರಾಮದ ಸಂತ ಪೌಲರ ರಸ್ತೆ ಅಭಿವೃದ್ಧಿ | (ಲಕ್ಷಗಳಲ್ಲಿ) |
| 2 | ಕಿನ್ನಿಗೋಳಿ ಗ್ರಾಮ ಪಂಚಾಯತಿನ ತಾಳಿಪಾಡಿ ಗ್ರಾಮದ ಗುತ್ತಕಾಡು ಮನೆ ನಿವೇಶನದ 1ನೇ ಅಡ್ಡರಸ್ತೆ ಅಭಿವೃದ್ಧಿ | 2.00 |
| 3 | ಕೋಣಾಜೆ ಗ್ರಾಮದ ಕೋಟೆಪದವು ಅಗರಿ ಮನೆಯ ಎದುರುಗಡೆ ಕಾಂಕ್ರೀಟೀಕರಣ | 3.00 |
| 4 | ಕೋಣಾಜೆ ಗ್ರಾಮದ ತಿಬ್ಲೆಪದವು ಹೆನ್ರಿರವರ ಮನೆ ಬಳಿಯಿಂದ ಇಲ್ಯಾಸ್‌ರವರ ಮನೆವರೆಗೆ ರಸ್ತೆ ಕಾಂಕ್ರೀಟೀಕರಣ | 1.50 |
| 5 | ಹರೇಕಳ ಗ್ರಾಮದ ಮಲಾರ್ ಎಂಬಲ್ಲಿನ ಫೆಲಿಕ್ಸ್‌ರವರ ಕೃಷಿ ಜಮೀನು ಕಡೆಗೆ ಹೋಗುವ ರಸ್ತೆ ಅಭಿವೃದ್ಧಿ | 1.00 |
| 6 | ಮಾನಂಪಾಡಿ ಗಜನಿ ಯೋಗೇಶ್‌ರವರ ಮನೆ ಬಳಿಯಿಂದ ನೇಮು ಮೂಲ್ಯರ ಗದ್ದೆಯ ಬಳಿ ರಸ್ತೆ ನಿರ್ಮಾಣ | 1.75 |
| 7 | ಮುನಪಂ ವ್ಯಾಪ್ತಿಯ ಚಿತ್ರಾಪು ಗಜನಿ ಮಠ ಬಳಿಯಿಂದ ಲೋಕೇಶ್ ಮನೆಯವರೆಗೆ ರಸ್ತೆ ಅಭಿವೃದ್ಧಿ | 3.00 |
| 8 | ಕಲ್ಲ ಮುಂಡ್ಕೂರು ಗ್ರಾಮ ಪಂಚಾಯತ್ ಆರ್ದೋಟ್ ರಸ್ತೆ | 2.00 |
| 9 | ಹೊಸಟ್ಟು ಗ್ರಾಮ ಪಂಚಾಯತ್ ಬರ್ಕೆದೊಟ್ಟು ರಸ್ತೆ | 1.50 |
| 10 | ಇರುವೈಲು ಗ್ರಾಮ ಪಂಚಾಯತ್ ದೇವರಗುಡ್ಡೆ ರಸ್ತೆ | 1.50 |
| 11 | ಪುತ್ತಿಗೆ ದೇವಸ್ಥಾನದಿಂದ ಕುಲ್ಲಂಗಾಲ್ - ಮಚ್ಚೆಗುರಿ - ಪುತ್ತಿಗೆ ಪದವು ರಸ್ತೆ | 1.30 |
| 12 | ಪಾಲಡ್ಕ - ಕೇಮಾರು - ಪೆಲಪಾಡಿ ಅಶ್ವತಕಟ್ಟೆ ರಸ್ತೆ | 1.00 |
| 13 | ಪಾಲಡ್ಕ ಗ್ರಾಮ ನೆಲ್ಲಿಕ್ಕೆ - ಕಲರಾಯಿ ರಸ್ತೆ | 2.00 |
| 14 | ಹೊಸಬೆಟ್ಟು ಗ್ರಾಮ ಪಂಚಾಯತ್ ವ್ಯಾಪ್ತಿಯ ಮಚ್ಚಮೊಗರು ಗ್ರಾಮದ ಸಂಗಾಬೆಟ್ಟೈಲು ರಸ್ತೆಯಿಂದ ಹೊಸಮನೆ ಸದಾಶಿವ ಪೂಜಾರಿಯವರ ಮನೆತನಕದ ರಸ್ತೆಗೆ ಕಾಂಕ್ರೀಟೀಕರಣ | 1.00<br>4.25 |
| 15 | ಶಿರ್ತಾಡಿ ಗ್ರಾಮದ ಮುರ್ಕಾಡಿ ರಸ್ತೆ | |
| 16 | ಮಧ್ಯ ಗುಂಡಾಲುನಿಂದ ಎಲ್ಲದಡಿ ವರೆಗಿನ ರಸ್ತೆ | 5.00 |
| 17 | ಮಂಗಳೂರು ತಾಲೂಕು ಕೊಂಪದವು ಗ್ರಾಮದ ಕಜೆ ಮನೆ ಎಂಬಲ್ಲಿ ಸೈ.ನಂ30/1, ಉಮನಾಥ್ ಶ್ಯಾನ್‌ಭೋಗ್ ಎಂಬವರ ಮನೆಯ ಬಳಿ ರಸ್ತೆ | 4.25<br>2.88 |
| 18 | ತೆಂಕಎಡಪದವು ಗ್ರಾಮದ ಒಡ್ಡೂರು ಪೆಂಕಳಿಕೆ ಹರಿಶ್ಚಂದ್ರ ಪ್ರಭುರವರ ಮನೆಯ ತನಕ ರಸ್ತೆ ಕಾಂಕ್ರೀಟೀಕರಣ. | |
| 19 | ನೀರುಮಾರ್ಗ ಗ್ರಾಮ ಪಂಚಾಯತ್ ಬೊಂಡಂತಿಲ ಗ್ರಾಮ, ಸಂತ ಥೋಮಸರ ಹಿ.ಪ್ರಾ.ಶಾಲೆ. ಪಕ್ಕದ ಹೊಸಮನೆ ಎಂಬಲ್ಲಿಂದ ಪಡುಪಳ್ಳಿ - ಪಡು ಸಂಪರ್ಕರಸ್ತೆ | 1.40<br>4.25 |
| 20 | ಸೋಮೇಶ್ವರ ಗ್ರಾಮ ಪಂಚಾಯಿತಿ, ಸೋಮೇಶ್ವರ ಗ್ರಾಮ ಪಂಜತ್ತಾಯ ದೈವಸ್ಥಾನ ಬಳಿಯ ಪಿಲಾರ್ ಜಲಂತಾಯಬೆಟ್ಟು. | |
| 21 | ಸೋಮೇಶ್ವರ ಗ್ರಾಮ ಪಂಚಾಯಿತಿ, ಸೋಮೇಶ್ವರ ಗ್ರಾಮ ಕುಂಟಿಕಾರು ಮಸೀದಿಯ ಬಳಿಯ ರಸ್ತೆ ಅಭಿವೃದ್ಧಿ | 1.50 |
| 22 | ತಲಪಾಡಿ ಗ್ರಾಮ ಪಂಚಾಯಿತಿ, ತಲಪಾಡಿ ಗ್ರಾಮ ಕಡಮೊಗರು ಬಳಿಯ ರಸ್ತೆ ಅಭಿವೃದ್ಧಿ. | 1.50 |
| 23 | ಕಾಟಪಳ್ಳ ಮಧ್ಯ ಗ್ರಾಮದ ಕುಲ್ಲಂಗಾರು ರಸ್ತೆಯಿಂದ ಕಿಂಡಿ ಅಣೆಕಟ್ಟುವರೆಗೆ ಸಂಪರ್ಕ ರಸ್ತೆ | 1.25 |
| 24 | ತೆಂಕಎಡಪದವು ಗ್ರಾಮದ ಒಡ್ಡೂರು, ಕೊಡಮಣಿತ್ತಾಯ ಹಾದು ಹೋಗುವ ಕೃಷಿಕರ ರಸ್ತೆ ಕಾಂಕ್ರೀಟೀಕರಣ | 4.28 |
| 25 | ಪುತ್ತಿಗೆ ಕಾಯರ್ ಪುಂಡು - ಅನಾವುಗುಡ್ಡೆ ಪಳಕಳ ಸಂಪರ್ಕ ರಸ್ತೆ 1 ಕಿ.ಮೀ. | 4.20 |
| 26 | ಬೆಳುವಾಯಿ ಅರಂಬೆಟ್ಟು ಆನಂದ ಹೆಗ್ಡೆ ಮನೆಯಿಂದ ಭೋಜ ಮಡಿವಾಳ ಮನೆತನಕ ರಸ್ತೆ | 1.19 |
| | | 1.50 |
| | ಒಟ್ಟು | 60.00 |

ಹೆಚ್ಚುವರಿ ನಿರ್ದೇಶಕರು(ಯೋಜನೆ)

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1535 |
| ಸದಸ್ಯರ ಹೆಸರು | : | ಶ್ರೀ ಮುರುಗೇಶ್ ರುದ್ರಪ್ಪ. ನಿರಾಣಿ |
| ಉತ್ತರಿಸುವ ದಿನಾಂಕ | : | 25/09/2020 |
| ಉತ್ತರಿಸುವ ಸಚಿವರು | : | ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ | ಗ್ರಾಮ ಪಂಚಾಯಿತಿಗಳನ್ನು "ಪಟ್ಟಣ ಪಂಚಾಯಿತಿ"ಗಳನ್ನಾಗಿ ಮೇಲ್ದರ್ಜೆಗೇರಿಸುವ ಸಂದರ್ಭದಲ್ಲಿ ಅನುಸರಿಸುವ ನಿಯಮಗಳೇನು; | ಗ್ರಾಮ ಪಂಚಾಯಿತಿಗಳನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಕರ್ನಾಟಕ ಪುರಸಭೆ ಅಧಿನಿಯಮ 1964 ಕಲಂ 349 ರನ್ವಯ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುತ್ತದೆ:<br>1. ಗ್ರಾಮ ಪಂಚಾಯಿತಿ ಪ್ರದೇಶದ ಜನಸಂಖ್ಯೆಯು 10,000ಕ್ಕೆ ಕಡಿಮೆ ಇಲ್ಲದಂತೆ ಹಾಗೂ 20,000ಕ್ಕೆ ಹೆಚ್ಚಿಲ್ಲದಂತಿರಬೇಕು.<br>2. ಅಂತಹ ಪ್ರದೇಶದ ಜನಸಂಖ್ಯೆಯು ಜನಸಾಂದ್ರತೆಯು ಆ ಪ್ರದೇಶದ ಒಂದು ಚ.ಕಿ.ಮೀ ವಿಸ್ತೀರ್ಣಕ್ಕೆ 400 ಕ್ಕಿಂತ ಕಡಿಮೆ ಇಲ್ಲದಿರುವುದು.<br>3. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗವಕಾಶಗಳ ಶೇಕಡಾವಾರು ಪ್ರಮಾಣವು ಒಟ್ಟು ಉದ್ಯೋಗದ ಪ್ರಮಾಣಕ್ಕಿಂತ ಶೇ.50ಕ್ಕಿಂತ ಕಡಿಮೆ ಇಲ್ಲದಿರುವುದು.<br><br>ದಿನಾಂಕ 19/03/2015ರಂದು ನಡೆದ ಸಚಿವ ಸಂಪುಟ ಸಭೆಯ ತೀರ್ಮಾನದನ್ವಯ 2011ರ ಜನಗಣತಿಯನ್ವಯ 15,000 ಕ್ಕಿಂತ ಹೆಚ್ಚು ಜನಸಂಖ್ಯೆ ಹೊಂದಿರುವ ಗ್ರಾಮ ಪಂಚಾಯಿತಿಗಳನ್ನು ಮಾತ್ರ ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮವಹಿಸಲಾಗುತ್ತಿದೆ. |
| ಆ | ಕಳೆದ ಎರಡು ವರ್ಷಗಳಲ್ಲಿ ರಾಜ್ಯಾದ್ಯಂತ ಎಷ್ಟು ಗ್ರಾಮ ಪಂಚಾಯಿತಿಗಳನ್ನು "ಪಟ್ಟಣ | ಕಳೆದ 2 ವರ್ಷಗಳಲ್ಲಿ 07 ಗ್ರಾಮ ಪಂಚಾಯಿತಿಗಳನ್ನು ಪಟ್ಟಣ ಪಂಚಾಯಿತಿಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ. ವಿವರ ಕೆಳಕಂಡಂತಿದೆ: |

<table>
<tr>
<td></td>
<td>ಪಂಚಾಯಿತಿ"ಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ (ತಾಲ್ಲೂಕುವಾರು ವಿವರ ನೀಡುವುದು);</td>
<td>
<table>
<tr><th colspan="2">ಜಿಲ್ಲೆ</th><th>ತಾಲೂಕು</th><th>ಗ್ರಾಮ ಪಂಚಾಯಿತಿ</th><th>ಪಟ್ಟಣ ಪಂಚಾಯಿತಿ</th></tr>
<tr><td>1</td><td>ಯಾದಗಿರಿ</td><td>ಹುಣಸಗಿ</td><td>ಹುಣಸಗಿ</td><td>ಹುಣಸಗಿ</td></tr>
<tr><td>2</td><td>ಹಾವೇರಿ</td><td>ರಟ್ಟೀಹಳ್ಳಿ</td><td>ರಟ್ಟೀಹಳ್ಳಿ</td><td>ರಟ್ಟೀಹಳ್ಳಿ</td></tr>
<tr><td>3</td><td>ದಕ್ಷಿಣ ಕನ್ನಡ</td><td>ಕಡಬ</td><td>ಕಡಬ</td><td>ಕಡಬ</td></tr>
<tr><td>4</td><td>ಚಿಕ್ಕಮಗಳೂರು</td><td>ಅಜ್ಜಂಪುರ</td><td>ಅಜ್ಜಂಪುರ</td><td>ಅಜ್ಜಂಪುರ</td></tr>
<tr><td>5</td><td>ವಿಜಯಪುರ</td><td>ತಿಕೋಟಾ</td><td>ತಿಕೋಟಾ</td><td>ತಿಕೋಟಾ</td></tr>
<tr><td>6</td><td>ಕಲಬುರಗಿ</td><td>ಕಮಲಾಪುರ</td><td>ಕಮಲಾಪುರ</td><td>ಕಮಲಾಪುರ</td></tr>
<tr><td>7</td><td>ಉಡುಪಿ</td><td>ಬೈಂದೂರು</td><td>ಬೈಂದೂರು,<br>ಯಡ್ತರೆ,<br>ಪಡವರಿ</td><td>ಬೈಂದೂರು</td></tr>
</table>
</td>
</tr>
<tr>
<td>ಇ</td>
<td>ಬಾಗಲಕೋಟೆ ಜಿಲ್ಲೆಯ ಎಷ್ಟು ಗ್ರಾಮ ಪಂಚಾಯಿತಿಗಳನ್ನು "ಪಟ್ಟಣ ಪಂಚಾಯಿತಿ" ಗಳನ್ನಾಗಿ ಮೇಲ್ದರ್ಜೆಗೇರಿಸಲು ಮನವಿಗಳು ಸ್ವೀಕೃತವಾಗಿವೆ (ಸಂಪೂರ್ಣ ವಿವರ ನೀಡುವುದು);</td>
<td>ಬಾಗಲಕೋಟೆ ಜಿಲ್ಲೆಯ 3 ಗ್ರಾಮ ಪಂಚಾಯತಿಗಳನ್ನು ಪಟ್ಟಣ ಪಂಚಾಯತಿಯನ್ನಾಗಿ ಮೇಲ್ದರ್ಜೆಗೇರಿಸಲು ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ:<br><br>1. ಮುಧೋಳ ತಾಲ್ಲೂಕಿನ ಲೋಕಾಪೂರ ಗ್ರಾಮ ಪಂಚಾಯಿತಿ:<br>2. ಬಾಗಲಕೋಟೆ ತಾಲ್ಲೂಕಿನ ಕಲಾದಗಿ ಗ್ರಾಮ ಪಂಚಾಯಿತಿ:<br>3. ಬಾಗಲಕೋಟೆ ತಾಲ್ಲೂಕಿನ ಶಿರೂರು ಮತ್ತು ನೀಲಾನಗರ ಗ್ರಾಮ ಪಂಚಾಯಿತಿಗಳು<br><br>ಮೇಲಿನ 03 ಪ್ರಸ್ತಾವನೆಗಳು ಸರ್ಕಾರದ ಪರಿಶೀಲನೆಯಲ್ಲಿರುತ್ತವೆ.</td>
</tr>
<tr>
<td>ಈ</td>
<td>ಬೀಳಗಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಬಾಗಲಕೋಟೆ ತಾಲ್ಲೂಕಿನ "ಕಲಾದಗಿ" ಗ್ರಾಮ ಪಂಚಾಯಿತಿಯನ್ನು "ಪಟ್ಟಣ ಪಂಚಾಯಿತಿ" ಯನ್ನಾಗಿ ಮೇಲ್ದರ್ಜೆಗೇರಿಸಬೇಕೆನ್ನುವ ಬೇಡಿಕೆಯು ಸರ್ಕಾರದ ಗಮನಕ್ಕೆ ಬಂದಿದೆಯೇ;</td>
<td>ಬಂದಿದೆ.</td>
</tr>
</table>

| | | |
|---|---|---|
| ಉ | ಹಾಗಿದ್ದಲ್ಲಿ, ಕಲಾದಗಿ ಗ್ರಾಮ ಪಂಚಾಯಿತಿಯನ್ನು "ಪಟ್ಟಣ ಪಂಚಾಯಿತಿ"ಯನ್ನಾಗಿ ಇಲ್ಲಿಯವರೆಗೂ ಮೇಲ್ದರ್ಜೆಗೇರಿಸದೆ ಇರಲು ಕಾರಣಗಳೇನು; (ವಿವರ ನೀಡುವುದು)? | 2011ರ ಜನಗಣತಿಯನುಸಾರ ಕಲಾದಗಿ ಗ್ರಾಮ ಪಂಚಾಯಿತಿಯ ಜನಸಂಖ್ಯೆ 13675 ಇರುತ್ತದೆ. ಆದರೆ, ದಿನಾಂಕ 19/03/2015ರಂದು ನಡೆದ ಸಚಿವ ಸಂಪುಟ ಸಭೆಯ ತೀರ್ಮಾನದನ್ವಯ 2011ರ ಜನಗಣತಿಯನ್ವಯ 15,000 ಕ್ಕಿಂತ ಹೆಚ್ಚು ಜನಸಂಖ್ಯೆ ಹೊಂದಿರುವ ಗ್ರಾಮ ಪಂಚಾಯಿತಿಗಳನ್ನು ಮಾತ್ರ ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮವಹಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಕಲಾದಗಿ ಗ್ರಾಮ ಪಂಚಾಯತಿಯನ್ನು ಪಟ್ಟಣ ಪಂಚಾಯತಿನ್ನಾಗಿ ಮೇಲ್ದರ್ಜೆಗೇರಿಸಲು ಸಾದ್ಯವಾಗಿರುವುದಿಲ್ಲ. |
| ಊ | ಯಾವ ಕಾಲಮಿತಿಯಲ್ಲಿ ಕಲಾದಗಿ ಗ್ರಾಮ ಪಂಚಾಯಿತಿಯನ್ನು "ಪಟ್ಟಣ ಪಂಚಾಯಿತಿ"ಯನ್ನಾಗಿ ಮೇಲ್ದರ್ಜೆಗೇರಿಸಲಾಗುವುದು? (ವಿವರ ನೀಡುವುದು)? | |

**ಸಂಖ್ಯೆ:ನಅಇ 63 ಎಲ್‌ಎಕ್ಯೂ 2020.**

(ಡಾ॥ ನಾರಾಯಣ ಗೌಡ)

**ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು**

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1553
ಸದಸ್ಯರ ಹೆಸರು : ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ (ಆಳಂದ)
ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು
ಉತ್ತರಿಸುವ ದಿನಾಂಕ : 25.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಲ್ಯಾಣ ಕರ್ನಾಟಕ ಭಾಗದಲ್ಲಿ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸಲು ಬೃಹತ್ ಹಾಗೂ ಮಧ್ಯಮ ಕೈಗಾರಿಕೆ ಸ್ಥಾಪನೆಗೆ ಉತ್ತೇಜನ ನೀಡಲು ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗಿದೆ ಹಾಗೂ ಎಷ್ಟು ಅನುದಾನವನ್ನು ಮೀಸಲಿರಿಸಲಾಗಿದೆ;(ವಿವರ ನೀಡುವುದು) | ಹೊಸ ಕೈಗಾರಿಕಾ ನೀತಿ 2020-25ನ್ನು ಜಾರಿಗೆ ತಂದಿದ್ದು, ಈ ನೀತಿಯಡಿ ಕಲ್ಯಾಣ ಕರ್ನಾಟಕದ ಎಲ್ಲಾ ತಾಲ್ಲೂಕುಗಳನ್ನು ವಲಯ-1 (ಅತ್ಯಂತ ಹಿಂದುಳಿದ ತಾಲ್ಲೂಕು) ಎಂದು ವರ್ಗೀಕರಿಸಲಾಗಿದೆ. ಇದರಿಂದ ಈ ಭಾಗದ ತಾಲ್ಲೂಕುಗಳಲ್ಲಿ ಸ್ಥಾಪನೆಯಾಗುವ ಕೈಗಾರಿಕೆಗಳಿಗೆ ಹೆಚ್ಚು ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ನೀಡಲಾಗಿದೆ.<br><br>ಕರ್ನಾಟಕ ರಾಜ್ಯ ಕೈಗಾರಿಕಾ ನೀತಿ 2020-25 ರಂತೆ ಈ ಕೆಳಕಂಡಂತೆ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ನೀಡಲು ಅವಕಾಶ ಕಲ್ಪಿಸಿದೆ.<br>1. ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ರಿಯಾಯಿತಿ<br>2. ಇಟಿಪಿ ಘಟಕ ಸಹಾಯಧನ<br>3. ಅಂಕರ್ ಘಟಕ ಸಹಾಯಧನ<br>4. ಭೂ ಪರಿವರ್ತನಾ ಶುಲ್ಕ ಮರುಪಾವತಿ<br>5. ಇನ್ವೆಸ್ಟ್‌ಮೆಂಟ್ ಪ್ರಮೋಷನ್ ಸಬ್ಸಿಡಿ<br>6. ಸಂಶೋಧನೆ ಮತ್ತು ಅಭಿವೃದ್ಧಿ ಕೇಂದ್ರಗಳ ಸ್ಥಾಪನೆಗೆ ಬೆಂಬಲ<br>7. ಇಂಡಸ್ಟ್ರೀ 4.0ಗೆ ಬೆಂಬಲ<br><br>ಮುಂದುವರೆದಂತೆ, ವಿವಿಧ ವಲಯಗಳ ಕೈಗಾರಿಕಾಭಿವೃದ್ಧಿಗೆ ಕರ್ನಾಟಕ ಏರೋಸ್ಪೇಸ್ ನೀತಿ 2013-23, ಕರ್ನಾಟಕ ಎಲೆಕ್ಟ್ರಿಕಲ್ ವೆಹಿಕಲ್ ಮತ್ತು ಎನರ್ಜಿ ಸ್ಟೋರೇಜ್ ಪಾಲಿಸಿ-2017 ಮತ್ತು ಕರ್ನಾಟಕ ಕೃಷಿ ವಾಣಿಜ್ಯ ಮತ್ತು ಅಹಾರ ಸಂಸ್ಕರಣಾ ನೀತಿ-2015 ಜಾರಿಯಲ್ಲಿದ್ದು, ಸದರಿ ನೀತಿಗಳಲ್ಲಿ ಸಹ ವಿವಿಧ ಪ್ರೋತ್ಸಾಹ ಮತ್ತು ರಿಯಾಯಿತಿ ನೀಡಲು ಅವಕಾಶ ಕಲ್ಪಿಸಿದೆ. |
| ಆ | ಆಳಂದ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬೃಹತ್ ಹಾಗೂ ಮಧ್ಯಮ ಕೈಗಾರಿಕೆಗಳಿಲ್ಲದೇ ಇರುವುದರಿಂದ ಈ ಭಾಗದ ನಿರುದ್ಯೋಗಿಗಳು ಬೆಂಗಳೂರು ಹಾಗೂ ಇತರೆ ಮಹಾನಗರಗಳಿಗೆ ವಲಸೆ ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಕಲ್ಯಾಣ ಕರ್ನಾಟಕ ವಿಭಾಗವು ಸೇರಿದಂತೆ ರಾಜ್ಯದ ಎಲ್ಲಾ ವಿಭಾಗಗಳಲ್ಲಿ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸಲು ಕೈಗಾರಿಕೆಗಳ ಸ್ಥಾಪನೆಗಾಗಿ ಸರ್ಕಾರ ಈ ಕೆಳಗಿನ ಯೋಜನೆಗಳನ್ನು ರೂಪಿಸಿರುತ್ತದೆ<br>1. ಕೇಂದ್ರ ಸರ್ಕಾರದ ಪ್ರಧಾನ ಮಂತ್ರಿಗಳ ಉದ್ಯೋಗ ಸೃಜನೆ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಠ ಸಾಲ ರೂ.25 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು |

1553

| | | |
|---|---|---|
| | | ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ.15 ರಿಂದ ಶೇ.35 ರವರೆಗೆ ಗರಿಷ್ಠ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br>2. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇ.6 ರಂತೆ ಬಡ್ಡಿ ಸಹಾಯಧನ ನೀಡಲಾಗುವುದು.<br>3. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕಉಪಯೋಜನೆ ಮತ್ತು ಗಿರಿಜನ ಉಪಯೋಜನೆ ಯಡಿಯಲ್ಲಿ ಶೇ.75 ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಠ 2 ಎಕರೆ) ಮತ್ತು ಶೇ.90 ರಿಯಾಯಿತಿ ದರದಲ್ಲಿ ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br>4. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಬ್ಯಾಂಕಿನಿಂದ ಸಾಲ ಒದಗಿಸಿ ಯೋಜನಾ ವೆಚ್ಚದ ಮೇಲೆ ಶೇ.60 ರಷ್ಟು ಗರಿಷ್ಠ ರೂ.5.00 ಲಕ್ಷ ಸಹಾಯಧನ ನೀಡಲಾಗುತ್ತಿದೆ.<br>5. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಮೊದಲ ಪೀಳಿಗೆಯ ಉದ್ಯಮಿದಾರರು ಬ್ಯಾಂಕ್/ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ ಘಟಕಗಳಿಗೆ ಗರಿಷ್ಟ ರೂ.2.00 ಕೋಟಿ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ)ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿರಹಿತ ಗರಿಷ್ಠ ರೂ.33 ಲಕ್ಷ ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುತ್ತಿದೆ.<br>6. ದಿನಾಂಕ 01.04.2017 ರಿಂದ ಮೊದಲ ಬಾರಿಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ಸ್ಥಾಪಿಸುವ ಸಣ್ಣ ಮತ್ತು ಅತೀ ಸಣ್ಣ ಘಟಕಗಳು ಸಾಲ ಪಡೆಯುವ ಸಂದರ್ಭದಲ್ಲಿ ಕೆಎಸ್.ಎಫ್.ಸಿ ಮತ್ತು ಇತರೇ ಹಣಕಾಸು ಸಂಸ್ಥೆಯವರು ವಿಧಿಸಿರುವ ಪರಿಷ್ಕರಣಾ ಶುಲ್ಕ, ಕಾನೂನು ಶುಲ್ಕ, ಏಕಕಾಲಿಕ ಸಾಲ ವಿತರಣಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಭರಿಸಲಾಗುತ್ತಿದೆ.<br>1. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಉದ್ಯಮಗಳು ದಿನಾಂಕ: 01-04-2017 ರಿಂದ ಪ್ರಾರಂಭವಾಗಿರುವ ಹೊಸ ಸಣ್ಣ ಮತ್ತು ಅತೀ ಸಣ್ಣ ಕೈಗಾರಿಕಾ ಘಟಕಗಳಿಗೆ ಮೊದಲ 5 ವರ್ಷಗಳ ಅವಧಿಗೆ ಪ್ರತಿ ಯುನಿಟ್‌ಗೆ 2 ರೂ.ಗಳಷ್ಟು ವಿದ್ಯುಚ್ಛಕ್ತಿ ಸಹಾಯಧನ ನೀಡಲಾಗುತ್ತಿದೆ. |

| | | |
|---|---|---|
| ಇ | ಬಂದಿದ್ದಲ್ಲಿ ನಿರುದ್ಯೋಗ ಸಮಸ್ಯೆ ಬಗೆಹರಿಸುವ ದೃಷ್ಟಿಯಿಂದ ಆಳಂದ ತಾಲ್ಲೂಕಿನಲ್ಲಿ ಬೃಹತ್ ಹಾಗೂ ಮಧ್ಯಮ ಕೈಗಾರಿಕೆ ಸ್ಥಾಪಿಸಲು ರೈತರು ತಮ್ಮ ಜಮೀನುಗಳನ್ನು ನೀಡಲು ಮುಂದೆ ಬಂದಿದ್ದು, ಈ ಬಗ್ಗೆ ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗುವುದು?(ವಿವರ ನೀಡುವುದು) | ಬೃಹತ್ ಹಾಗೂ ಮಧ್ಯಮ ಕೈಗಾರಿಕೆ ಸ್ಥಾಪಿಸಲು ಮುಂದೆ ಬರುವ ಉದ್ದಿಮೆದಾರರಿಗೆ ಆಳಂದ ತಾಲ್ಲೂಕಿನಲ್ಲಿ ಕೈಗಾರಿಕೆಯನ್ನು ಸ್ಥಾಪಿಸಲು ಇಲಾಖೆ ಮಟ್ಟದಲ್ಲಿ ಪ್ರೇರೇಪಿಸಲಾಗುತ್ತಿದೆ. |

ಸಿಐ 250 ಎಸ್‌ಪಿಐ 2020

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1593

ಸದಸ್ಯರ ಹೆಸರು : ಶ್ರೀ ವೆಂಕಟ್‌ರಾವ್ ನಾಡಗೌಡ (ಸಿಂಧನೂರು)

ಉತ್ತರಿಸಬೇಕಾದ ದಿನಾಂಕ : 25.09.2020.

ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು? (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು). | ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಜಿಲ್ಲಾ ಮಟ್ಟದ ಕಚೇರಿಗಳು ಮತ್ತು ಕೆಲವು ಜಿಲ್ಲೆಗಳಲ್ಲಿ ಉಪ ವಿಭಾಗಗಳು ಮಾತ್ರ ಸ್ಥಾಪಿತವಾಗಿರುವುದರಿಂದ ಗ್ರೂಪ್ 'ಎ', 'ಬಿ', 'ಸಿ' ಮತ್ತು 'ಡಿ' ವೃಂದಗಳಲ್ಲಿ ಜಿಲ್ಲಾವಾರು ಖಾಲಿ ಇರುವ ಒಟ್ಟು 564 ಹುದ್ದೆಗಳ ವಿವರಗಳನ್ನು ಅನುಬಂಧ-1 ರಲ್ಲಿ ಇದರೊಂದಿಗೆ ಲಗತ್ತಿಸಿದೆ. |
| (ಆ) | ಈ ಇಲಾಖೆಯಲ್ಲಿ ಖಾಲಿ ಇರುವ ಸಿಬ್ಬಂದಿಗಳ ನೇಮಕಾತಿಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು?(ಸಂಪೂರ್ಣ ಮಾಹಿತಿ ನೀಡುವುದು) | ಇಲಾಖೆಯ ವಿವಿಧ ವೃಂದಗಳಲ್ಲಿ ಖಾಲಿ ಇರುವ ಹುದ್ದೆಗಳ ವೃಂದವಾರು ಮಾಹಿತಿ ಹಾಗೂ ಅವುಗಳ ಭರ್ತಿಗಾಗಿ ತಗಲುವ ವೇತನ ಮತ್ತು ವೇತನೇತರ ವೆಚ್ಚದ ಅಂದಾಜು ವಿವರವನ್ನು ಒಳಗೊಂಡ ವಿವರವಾದ ಪ್ರಸ್ತಾವನೆಯನ್ನು ಸಿದ್ಧಪಡಿಸಿ, ಸಹಮತಿ ನೀಡುವಂತೆ ಆರ್ಥಿಕ ಇಲಾಖೆಯನ್ನು ದಿನಾಂಕ: 07.11.2019ರಂದು ಕೋರಲಾಗಿದೆ. ಆರ್ಥಿಕ ಇಲಾಖೆಯು ಕೆಲವು ಸ್ಪಷ್ಟೀಕರಣಗಳನ್ನು ಕೋರಿದ್ದು, ಅದನ್ನು ಸಲ್ಲಿಸುವಂತೆ ದಿನಾಂಕ; 05.02.2020 ರಂದು ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯಕ್ಕೆ ತಿಳಿಸಲಾಗಿರುತ್ತದೆ. |
| (ಇ) | ಈ ಇಲಾಖೆಯಲ್ಲಿ ಖಾಲಿ ಇರುವ ಸಿಬ್ಬಂದಿಗಳ ನೇಮಕಾತಿಯನ್ನು ಸರ್ಕಾರ ಯಾವ ಕಾಲಮಿತಿಯೊಳಗೆ ಪೂರ್ಣಗೊಳಿಸುವುದು(ಸಂಪೂರ್ಣ ಮಾಹಿತಿ ನೀಡುವುದು) | ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಭರ್ತಿಗೆ ಆರ್ಥಿಕ ಇಲಾಖೆಯೊಂದಿಗೆ ವ್ಯವಹರಿಸಲಾಗುತ್ತಿದೆ. ಸಹಮತಿ ದೊರೆತ ನಂತರ ನಿಯಮಾನುಸಾರ ಭರ್ತಿ ಪ್ರಕ್ರಿಯೆಯನ್ನು ಚುರುಕುಗೊಳಿಸಲಾಗುವುದು. |
| (ಈ) | ಈ ಇಲಾಖೆಯಲ್ಲಿ ಖಾಲಿ ಇರುವ ಸಿಬ್ಬಂದಿಗಳ ನೇಮಕಾತಿಗೆ ಇರುವ ತೊಂದರೆಗಳೇನು?(ಸಂಪೂರ್ಣ ಮಾಹಿತಿ ನೀಡುವುದು) | ಆರ್ಥಿಕ ಇಲಾಖೆಯ ಸಹಮತಿ ದೊರೆತ ನಂತರ ನೇಮಕಾತಿ ಪ್ರಕ್ರಿಯೆ ಕೈಗೊಳ್ಳಲಾಗುವುದು. |

ವಾಕೈ 82 ಕೈಸೇವಿ 2020

(ಜಗದೀಶ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

1593

ಅನುಬಂಧ- 1

ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಗ್ರೂಪ್ 'ಎ', 'ಬಿ', 'ಸಿ' ಮತ್ತು 'ಡಿ' ವೃಂದಗಳ ಜಿಲ್ಲಾವಾರು ಖಾಲಿ ಹುದ್ದೆಗಳ ವಿವರ

| ಕ್ರ. ಸಂ | ಜಿಲ್ಲೆಗಳು | ಅಪರ ನಿರ್ದೇಶಕರು | ಜಂಟಿ ನಿರ್ದೇಶಕರು | ಉಪ ನಿರ್ದೇಶಕರು | ಸಹಾಯಕ ನಿರ್ದೇಶಕರು | ಅಧೀಕ್ಷಕರು | ಕೈಗಾರಿಕಾ ವಿಸ್ತರಣಾಧಿಕಾರಿ | ಬೋಧಕ 'ರು | ಸಹಾಯಕ ಬೋಧಕರು | ಪ್ರ.ದ.ಸ | ದ್ವಿ.ದ.ಸ | ಶೀಘ್ರಲಿಪಿ ಗಾರರು | ಬೆರಳಚ್ಚು ಗಾರರು | ಗಣತಿ ದಾರರು | ವಾಹನ ಚಾಲಕರು | ಜಮೇ ದಾರರು | ಗ್ರೂಪ್ 'ಡಿ' | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|
| 1 | ಬೆಂಗಳೂರು ನಗರ ಕೇಂದ್ರ ಕಚೇರಿ/ನಿಗಮ ಮಂಡಳಿ ಒಳಗೊಂಡಂತೆ | 2 | 7 | 15 | 0 | 1 | 19 | 2 | 3 | 3 | 13 | 4 | 13 | 3 | 6 | 3 | 15 | 109 |
| 2 | ಬೆಂಗಳೂರು (ಗ್ರಾ) | 0 | 0 | 2 | 1 | 0 | 2 | 0 | 0 | 2 | 1 | 1 | 2 | 1 | 0 | 0 | 2 | 14 |
| 3 | ಬಾಗಲಕೋಟೆ | 0 | 0 | 2 | 1 | 0 | 5 | 0 | 0 | 1 | 1 | 0 | 1 | 1 | 0 | 0 | 3 | 15 |
| 4 | ಬೆಳಗಾವಿ | 0 | 0 | 2 | 1 | 0 | 8 | 0 | 0 | 3 | 1 | 0 | 1 | 1 | 0 | 0 | 3 | 20 |
| 5 | ಬಳ್ಳಾರಿ | 0 | 0 | 1 | 2 | 0 | 4 | 0 | 1 | 1 | 0 | 0 | 2 | 1 | 0 | 0 | 4 | 16 |
| 6 | ಬೀದರ್ | 0 | 0 | 1 | 0 | 0 | 4 | 0 | 0 | 2 | 0 | 0 | 2 | 1 | 0 | 0 | 1 | 11 |
| 7 | ವಿಜಾಪುರ | 0 | 0 | 1 | 1 | 0 | 3 | 0 | 1 | 3 | 1 | 0 | 2 | 0 | 0 | 0 | 4 | 16 |
| 8 | ಚಾಮರಾಜನಗರ | 0 | 1 | 2 | 1 | 0 | 3 | 0 | 0 | 1 | 1 | 0 | 1 | 1 | 0 | 0 | 2 | 13 |
| 9 | ಚಿಕ್ಕಮಗಳೂರು | 0 | 0 | 2 | 2 | 0 | 7 | 2 | 0 | 3 | 1 | 1 | 2 | 1 | 0 | 0 | 4 | 25 |
| 10 | ಚಿಕ್ಕಬಳ್ಳಾಪುರ | 0 | 0 | 1 | 2 | 0 | 3 | 0 | 0 | 2 | 1 | 0 | 2 | 1 | 0 | 0 | 2 | 14 |
| 11 | ಚಿತ್ರದುರ್ಗ | 0 | 1 | 2 | 1 | 0 | 6 | 1 | 0 | 2 | 1 | 1 | 2 | 1 | 0 | 0 | 2 | 20 |
| 12 | ದಕ್ಷಿಣ ಕನ್ನಡ | 0 | 0 | 2 | 1 | 0 | 4 | 1 | 0 | 1 | 0 | 1 | 1 | 1 | 0 | 0 | 0 | 12 |
| 13 | ದಾವಣಗೆರೆ | 0 | 0 | 2 | 0 | 0 | 5 | 0 | 0 | 0 | 0 | 1 | 2 | 1 | 0 | 0 | 1 | 12 |
| 14 | ಧಾರವಾಡ | 0 | 1 | 2 | 0 | 0 | 3 | 0 | 0 | 1 | 0 | 1 | 2 | 1 | 0 | 0 | 1 | 12 |
| 15 | ಗದಗ | 0 | 1 | 2 | 2 | 0 | 4 | 0 | 0 | 1 | 1 | 0 | 2 | 1 | 0 | 0 | 2 | 16 |
| 16 | ಕಲಬುರಗಿ | 0 | 0 | 2 | 0 | 0 | 3 | 1 | 1 | 1 | 0 | 1 | 1 | 1 | 0 | 0 | 4 | 15 |
| 17 | ಹಾಸನ | 0 | 0 | 1 | 1 | 0 | 7 | 1 | 0 | 2 | 0 | 1 | 2 | 1 | 0 | 0 | 4 | 20 |
| 18 | ಹಾವೇರಿ | 0 | 1 | 2 | 0 | 0 | 7 | 0 | 0 | 1 | 1 | 0 | 2 | 1 | 0 | 0 | 3 | 18 |
| 19 | ಕೊಡಗು | 0 | 1 | 2 | 2 | 0 | 3 | 0 | 0 | 2 | 0 | 0 | 2 | 1 | 0 | 0 | 3 | 16 |
| 20 | ಕೋಲಾರ | 0 | 0 | 2 | 0 | 0 | 4 | 0 | 0 | 0 | 1 | 1 | 2 | 1 | 0 | 0 | 2 | 13 |
| 21 | ಕೊಪ್ಪಳ | 0 | 0 | 2 | 2 | 0 | 2 | 0 | 0 | 1 | 1 | 0 | 2 | 1 | 0 | 0 | 2 | 13 |
| 22 | ಮೈಸೂರು | 0 | 0 | 2 | 2 | 0 | 4 | 2 | 0 | 1 | 1 | 1 | 1 | 1 | 0 | 0 | 0 | 15 |
| 23 | ಮಂಡ್ಯ | 0 | 0 | 2 | 1 | 0 | 6 | 0 | 0 | 1 | 1 | 1 | 2 | 1 | 0 | 0 | 2 | 17 |
| 24 | ರಾಮನಗರ | 0 | 0 | 1 | 1 | 0 | 3 | 0 | 1 | 1 | 1 | 1 | 2 | 1 | 0 | 0 | 0 | 12 |
| 25 | ರಾಯಚೂರು | 0 | 0 | 2 | 1 | 0 | 4 | 0 | 0 | 3 | 0 | 0 | 1 | 1 | 0 | 0 | 2 | 14 |
| 26 | ಶಿವಮೊಗ್ಗ | 0 | 0 | 2 | 0 | 0 | 7 | 2 | 0 | 2 | 0 | 1 | 1 | 1 | 0 | 0 | 2 | 18 |
| 27 | ತುಮಕೂರು | 0 | 0 | 1 | 1 | 0 | 7 | 1 | 1 | 2 | 0 | 0 | 2 | 1 | 0 | 0 | 0 | 16 |
| 28 | ಉಡುಪಿ | 0 | 1 | 2 | 1 | 0 | 2 | 0 | 0 | 1 | 0 | 1 | 2 | 1 | 0 | 0 | 3 | 14 |
| 29 | ಉತ್ತರ ಕನ್ನಡ | 0 | 1 | 1 | 1 | 0 | 9 | 0 | 0 | 2 | 1 | 1 | 2 | 1 | 0 | 0 | 5 | 24 |
| 30 | ಯಾದಗಿರಿ | 0 | 1 | 2 | 0 | 0 | 2 | 0 | 0 | 2 | 0 | 1 | 2 | 1 | 0 | 0 | 3 | 14 |
| | ಒಟ್ಟು | 2 | 16 | 65 | 28 | 1 | 150 | 13 | 8 | 48 | 29 | 20 | 63 | 31 | 6 | 3 | 81 | 564 |

ಅಪರ ನಿರ್ದೇಶಕರು(ಆಡಳಿತ)

# ಕರ್ನಾಟಕ ವಿಧಾನ ಸಭೆ

**ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಮಂಜುನಾಥ. ಎ.**
**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1599**
**ಉತ್ತರಿಸಬೇಕಾದ ದಿನಾಂಕ : 25.09.2020**

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳ ಅವಧಿಯಲ್ಲಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಇಲ್ಲಿ ಅಧ್ಯಕ್ಷರು, ಆಡಳಿತ ಮಂಡಳಿ ಹಾಗೂ ವ್ಯವಸ್ಥಾಪಕ ನಿರ್ದೇಶಕರು ನಡೆಸಿರುವ ಅವ್ಯವಹಾರಗಳ ದೂರಿನ ಅಂಶಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಪ್ರತಿ ಅಂಶಗಳನ್ನು ಲಿಖಿತವಾಗಿ ತಿಳಿಸುವುದು. | ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಅಧ್ಯಕ್ಷರು, ಆಡಳಿತ ಮಂಡಳಿ ಹಾಗೂ ವ್ಯವಸ್ಥಾಪಕ ನಿರ್ದೇಶಕರು ನಡೆಸಿರುವ ಅವ್ಯವಹಾರಗಳ ಕುರಿತಂತೆ ಕ್ರಮ ವಹಿಸುವಂತೆ ಕೋರಿ ಆರ್.ಬಿ.ಐ. ನಬಾರ್ಡ್ ಹಾಗೂ ಎ.ಸಿ.ಬಿ. ಕಛೇರಿಯಿಂದ ಸ್ವೀಕೃತವಾಗಿರುವ ಪತ್ರ/ದೂರು ಅರ್ಜಿಗಳಲ್ಲಿನ ಅಂಶಗಳನ್ನು ಬ್ಯಾಂಕಿನ ದಾಖಲಾತಿಗಳೊಂದಿಗೆ ಪರಿಶೀಲಿಸಲು ತಂಡವನ್ನು ನಿಯೋಜಿಸಲಾಗಿತ್ತು.<br>ಪರಿಶೀಲನಾ ತಂಡವು ದೂರು ಅರ್ಜಿಗಳಲ್ಲಿನ ಪ್ರತಿಯೊಂದು ಅಂಶಗಳನ್ನು ಬ್ಯಾಂಕಿನ ದಾಖಲಾತಿಗಳೊಡನೆ ಪರಿಶೀಲಿಸಿ, ವರದಿಯನ್ನು ಸಲ್ಲಿಸಿದ್ದು, ವರದಿಯಲ್ಲಿ ದೂರು ಅರ್ಜಿಗಳಲ್ಲಿನ ಕೆಲವೊಂದು ಅಂಶಗಳು ಸಾಬೀತಾಗಿದ್ದು, ಹೆಚ್ಚಿನ ತನಿಖೆಯ ಅವಶ್ಯವಿದೆ ಎಂದು ಅಭಿಪ್ರಾಯಪಟ್ಟಿರುವ ಹಿನ್ನೆಲೆಯಲ್ಲಿ ಪರಿಶೀಲನಾ ತಂಡದ ವರದಿಯನ್ನಾಧರಿಸಿ, (1) 26 ಸಕ್ಕರೆ ಕಾರ್ಖಾನೆಗಳಿಗೆ ನೀಡಿರುವ ಸಾಲ & ಮುಂಗಡಗಳು, (2) 2013-14 ರಿಂದ 2018-19 ನೇ ಅವಧಿಯಲ್ಲಿ ಬ್ಯಾಂಕಿನ ಹೂಡಿಕೆ ಮತ್ತು ಭದ್ರತಾ ಪತ್ರಗಳ ಖರೀದಿಯ ವ್ಯವಹಾರ (3) ಶ್ರೀಮತಿ ಉಮಾ ಸುರೇಶ್ ಮತ್ತು ಆನೇಕಲ್ ತಿಮ್ಮಯ್ಯ ಚಾರಿಟಬಲ್ ಟ್ರಸ್ಟ್, ಬೆಂಗಳೂರು ಇವರುಗಳಿಗೆ ಏಕಕಾಲಿಕ ಸಾಲ ತೀರುವಳಿ ಯೋಜನೆಯಡಿ ಸಾಲ ತೀರುವಳಿ, (4) ರಿಯಲ್ ಎಸ್ಟೇಟ್, ಸೀಗಡಿ ಮೀನಿನ ಉತ್ಪಾದನಾ ಘಟಕಗಳು ಸೇರಿದಂತೆ 11 ಜನ/ಸಂಸ್ಥೆಗಳಿಗೆ ನೀಡಿರುವ ಯೋಜನಾಬದ್ಧ ಸಾಲಗಳು. (5) ಕೋರ್ ಬ್ಯಾಂಕಿಂಗ್ ಸಾಫ್ಟ್‌ವೇರ್ ಖರೀದಿ. (6) ಸೇವಾ ಜ್ಯೇಷ್ಠತೆಯನ್ನು ಪರಿಗಣಿಸದೆ ಬ್ಯಾಂಕಿನ ಸಿಬ್ಬಂದಿಗಳಿಗೆ ಪದೋನ್ನತಿ ನೀಡಿರುವುದು, (7) ಕಂಪ್ಯೂಟರ್ ತಜ್ಞರಲ್ಲದ ಬಿ.ಕಾಂ. ಪದವೀಧರರನ್ನು ಸಾಫ್ಟ್‌ವೇರ್ ನಿರ್ವಹಣೆಗೆ ಸಲಹೆಗಾರರನ್ನಾಗಿ ನೇಮಕ ಮಾಡಿಕೊಂಡಿರುವುದು, (8)ಬ್ಯಾಂಕಿನ ಸೇವೆಯಿಂದ ವಜಾಗೊಂಡ ಶ್ರೀಮತಿ ಲಕ್ಷ್ಮೀದೇವಿ ಮತ್ತು ಇತರರ ನೌಕರರಿಗೆ ವೇತನ ನಿವೃತ್ತಿ ಸೌಲಭ್ಯ ಪಾವತಿಸಿರುವುದು, (9) 2016 ನೇ ಸಾಲಿನಲ್ಲಿ ಸುಮಾರು 100 ದ್ವಿತೀಯ ದರ್ಜೆ ಸಹಾಯಕರ ನೇಮಕಾತಿಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರ ಮತ್ತು ಸ್ವಜನ ಪಕ್ಷಪಾತ ಹಾಗೂ (10) ಸುಸ್ತಿ ಸಾಲಗಳನ್ನು ಪುನರುಜ್ಜೀವನ ಸಾಲವಾಗಿ ಪರಿವರ್ತಿಸಿರುವುದು ಹೀಗೆ 10 ಅಂಶಗಳ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 64 ರಡಿ ವಿಚಾರಣೆ ನಡೆಸಲು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ, ದಿನಾಂಕ:08-07-2019 ರಂದು ಆದೇಶಿಸಿದ್ದು, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ದಿನಾಂಕ:05-12-2019 ರಂದು ಸಲ್ಲಿಸಿರುತ್ತಾರೆ. |

